KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೬, ೨೦೧೦ (ಭಾದ್ರಪದ ೨೫, ಶಕ ವರ್ಷ ೧೯೩೨) | ಸಂಚಿಕೆ ೩೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಟಿ.ಕೆ. ಶಂಕರ್, ಮಾಜಿ ಪಿ.ಸಿ. 1ನೇ ಪಡೆ, ಕೆ.ಎಸ್.ಆರ್.ಪಿ., ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: 06/ಡಿಇ/ಆರ್6/2006 ದಿನಾಂಕ: 07–08–2007.

2) **ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು7/2007–08 ದಿನಾಂಕ: 23–05–08.**

3. **ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:** 16–9–09.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)44/2009–10 ದಿನಾಂಕ: 29–01–10.

**ಪ್ರಸ್ತಾವನೆ:**

ಶ್ರೀ ಟಿ.ಕೆ. ಶಂಕರ್, ಪಿ.ಸಿ.–03, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರಿನಲ್ಲಿ, ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಉದಾಸೀನತೆ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

ದೋಷಾರೋಪಣೆ:

1. ಶ್ರೀ ಟಿ.ಕೆ. ಶಂಕರ್, ಪಿ.ಸಿ.–03, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಆದ ನೀವು ದಿನಾಂಕ: 20–09–2005 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿದ್ದು ಗೈರು ಹಾಜರಿಯಲ್ಲಿಯೇ ಮುಂದುವರಿದಿದ್ದು ಮೇಲಾಧಿಕಾರಿಗಳಿಂದ ಯಾವುದೇ ರಜೆಯನ್ನಾಗಲಿ ಅನುಮತಿಯನ್ನಾಗಲಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿರುವುದು ಹಾಗೂ ನೀವು ನಿಮ್ಮ ಕರ್ತವ್ಯದ ಬಗ್ಗೆ ಉದಾಸೀನತೆ, ದುರ್ನಡತೆ, ಅಶಿಸ್ತು ಪ್ರದರ್ಶಿಸಿರುತ್ತೀರಿ.

2. ಹಾಗೂ ಮೇಲ್ಕಂಡ ಗೈರು ಹಾಜರಾದ ಸಂದರ್ಭದಲ್ಲಿ 21 ದಿನಗಳ ನಂತರ ನಿಮಗೆ ಹಂಗಾಮಿ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ನೋಟೀಸನ್ನು ದಿನಾಂಕ: 31–10–2005 ರಂದು

ಹಾಗೂ ನಿಯಮ 7ರಡಿ ಹೊರಡಿಸಲಾಗಿರುವ ದೋಷಾರೋಪಣೆ ಪತ್ರವನ್ನು ದಿನಾಂಕ: 18–12–2005 ರಂದು ಖುದ್ದಾಗಿ ಸ್ವೀಕರಿಸಿಕೊಂಡು ಈವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ ದೋಷವೆಸಗಿರುತ್ತೀರಿ. ಇದು ನಿಮ್ಮ ಮೇಲೆ ಹೊರಿಸಿರುವ ಆರೋಪವಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 07–08–07ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ದಿನಾಂಕ: 20–09–05 ರಿಂದ 05–07–07ರ ವರೆಗಿನ ಒಟ್ಟು 654 ದಿನಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 23–05–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯವುದೇ ಸಮರ್ಥನೀಯ ಕಾರಣಗಳು ಇಲ್ಲದಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.: ಒಇ 170 ಪೊಸಿಅ 2009, ಬೆಂಗಳೂರು, ದಿನಾಂಕ: 17–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಕೆ. ಶಂಕರ್, ಮಾಜಿ ಪಿ.ಸಿ., 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1593

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ನಾಗಪ್ಪ, ಪಿ.ಸಿ., ಡಿ.ಎ.ಆರ್., ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ: ಸಿಬ್ಬಂದಿ 4/16/ಡಿಇ/2008 ಅ.ಪು.ಸಂ.: 358/09 ದಿನಾಂಕ: 01–06–09.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/29/ಈವ/2009/4719 ಅ.ಪು. ಸಂ.: 1593/ಈವ/09 ದಿನಾಂಕ: 10–09–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–12–09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)72/2009–10 ದಿನಾಂಕ: 22–3–10.

**ಪ್ರಸ್ತಾವನೆ:**

ಶ್ರೀ ನಾಗಪ್ಪ, ಇವರು ಜಿಲ್ಲಾ ಸಶಸ್ತ್ರ ಪಡೆ, ಬೀದರ್‌ನಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕಛೇರಿಯ ಕರ್ತವ್ಯಕ್ಕೆ ಅಡ್ಡಿಪಡಿಸಿ ದುರ್ನಡತೆ ಎಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

ದೋಷಾರೋಪಣೆ:

"ನೀವು ನಾಗಪ್ಪ ಎ.ಪಿ.ಸಿ.–250, ಡಿ.ಎ.ಆರ್. ಬೀದರ್, ಶಿಸ್ತು ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು ಜವಾಬ್ದಾರಿಯುತ ಸಿಬ್ಬಂದಿಯಾಗಿದ್ದು, ಕರ್ನಾಟಕ ಪೊಲೀಸ್ ಕೈಪಿಡಿ ಆದೇಶಗಳ ಪ್ರಕಾರ ಮೇಲಾಧಿಕಾರಿಗಳು ಕಾಲ ಕಾಲಕ್ಕೆ ನೀಡಿರುವ ಆದೇಶ ಪಾಲನೆ ಮಾಡುವುದು ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ನೀವು ದಿನಾಂಕ: 02–08–08 ರಂದು ಮಧ್ಯಾಹ್ನ 13.30 ಗಂಟೆಗೆ ಸಾರಾಯಿ ಕುಡಿದು ಅಮಲಿನಲ್ಲಿ ಸಮವಸ್ತ್ರ ಧರಿಸದೇ ನಿಮ್ಮ ಮೇಲಾಧಿಕಾರಿಯಾದ ಆರ್.ಪಿ.ಐ., ಡಿ.ಎ.ಆರ್. ಬೀದರ್, ರವರ ಕಛೇರಿಗೆ ಹೋಗಿ ಕರ್ತವ್ಯಕ್ಕೆ ತೆಗೆದುಕೊಳ್ಳದಿದ್ದರೆ ನೀವು ಬೀದರ್‌ನಲ್ಲಿ ಹೇಗೆ ಕರ್ತವ್ಯ ಮಾಡುತ್ತಿ ನೋಡಿಕೊಳ್ಳುತ್ತೇನೆ ಎಂದು ಬೆದರಿಕೆ ಹಾಕಿದ್ದಲ್ಲದೇ ಕೈಯಲ್ಲಿ ಕಲ್ಲು ತೆಗೆದುಕೊಂಡು ಬಂದು ಹೊಡೆಯಲು ಯತ್ನಿಸಿ ಅವರ ಕಛೇರಿಯ ಕರ್ತವ್ಯದಲ್ಲಿ ಅಡ್ಡಿ ಪಡಿಸಿ, ನೀವು ಖಂಡನೀಯ ದುರ್ನಡತೆ ಎಸಗಿರುವುದು ಇತ್ಯಾದಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 01–06–2009ರ ಆದೇಶದಲ್ಲಿ ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ದಿನಾಂಕ: 12–08–08 ರಿಂದ 16–11–08ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–09–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 3 ಪೊಸಿಅ 2010, ಬೆಂಗಳೂರು, ದಿನಾಂಕ: 17–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗಪ್ಪ, ಮಾಜಿ ಪಿ.ಸಿ., ಇವರು ಜಿಲ್ಲಾ ಸಶಸ್ತ್ರ ಪಡೆ, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1594

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಿ. ಓಬಳಪ್ಪ, ಪಿ.ಸಿ., 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಇವಿ(1)/08/2002–03 ದಿನಾಂಕ: 16–7–03.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/11/2003–04 ದಿನಾಂಕ: 26–07–04.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 12–10–09.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)50/09–10 ದಿನಾಂಕ: 21–12–2009.

**ಪ್ರಸ್ತಾವನೆ:**

ಶ್ರೀ ಸಿ. ಓಬಳಪ್ಪ, ಪಿ.ಸಿ., 9ನೇ ಪಡೆ, ಕೆ.ಎಸ್.ಆರ್.ಪಿ., ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

ದೋಷರೋಪಣೆ:

"ಪೇದೆ ಸಂಖ್ಯೆ: 134, ಸಿ. ಓಬಳಪ್ಪ, ಆದ ನೀವು ಇತರೆ ಮೂರು ಜನರೊಂದಿಗೆ ಶಾಮೀಲಾಗಿ ದಿನಾಂಕ: 18-06-2002 ರಂದು ಸಮಯ ಸುಮಾರು 1100 ಗಂಟೆಗೆ ಕೋರಮಂಗಲ 1ನೇ ಬ್ಲಾಕ್‌ನಲ್ಲಿರುವ ರಾಬಿಯಾ ಕಾನ್ವೆಂಟ್ ಬಳಿ ಶ್ರೀ ವೇಣುಗೋಪಾಲ್ ಎಂಬ ವ್ಯಕ್ತಿಯನ್ನು ಬಲವಂತವಾಗಿ ಕಾರಿನಲ್ಲಿ ಅಪಹರಿಸಿಕೊಂಡು ಹೋಗಿ ಕಾಮಾಕ್ಷಿಪಾಳ್ಯದ ಒಂದು ರೂಮಿನಲ್ಲಿ ಅಕ್ರಮ ಬಂಧನದಲ್ಲಿಟ್ಟು ಬೆದರಿಕೆ ಹಾಕಿದ ಪ್ರಯುಕ್ತ ನಿಮ್ಮನ್ನು ದಿನಾಂಕ: 20-06-2002 ರಂದು ಸುಮಾರು ರಾತ್ರಿ 8.45 ಗಂಟೆಗೆ ಅಪರಾಧವೆಸಗುತ್ತಿರುವಾಗಲೇ ಬಂಧಿಸಿ ನಿಮ್ಮ ಮೇಲೆ ಕೋರಮಂಗಲ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 374/2002, ಕಲಂ-365, 342, 384 ರೆಡ್ ವಿತ್ 34 ಐ.ಪಿ.ಸಿ. ಪ್ರಕಾರ ಕೇಸು ದಾಖಲಾಗಿರುವ ಮೂಲಕ ನೀವು ಅತೀವ ದುರ್ನಡತೆ ಪ್ರದರ್ಶಿಸಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ವರದಿ ನೀಡಿದ್ದಾರೆ. ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಮತ್ತು ದಾಖಲೆಗಳನ್ನು ಪರಿಶೀಲಿಸಿ ವಿಚಾರಣಾಧಿಕಾರಿಯು ಸಾಕ್ಷಿದಾರರನ್ನು ಸರಿಯಾಗಿ ಪರೀಕ್ಷಿಸದೇ ಇರುವುದನ್ನು ಗಮನಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 16-07-03ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆ ವಿಧಿಸಿರುತ್ತಾರೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಂಕ: 26-07-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 183 ಪೊಸಿಅ 2009, ಬೆಂಗಳೂರು, ದಿನಾಂಕ: 17-06-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ. ಓಬಳಪ್ಪ, ಪಿ.ಸಿ., 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1595

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ** : ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಆರ್–ಸೆಟಿ ಸಂಸ್ಥೆ ಸ್ಥಾಪನೆಗಾಗಿ ನಿವೇಶನವನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ** :
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: I. 12011/19/2008–ಎಸ್‌ಜಿಎಸ್‌ವೈ (ಸಿ),ದಿನಾಂಕ: 07.01.2009
2. ರಾಜ್ಯ ಸರ್ಕಾರದ ಪತ್ರದ ಸಂಖ್ಯೆ: ಗ್ರಾಅಪ130 ಎಸ್‌ಜೆವೈ (ಇನ್‌ಫ್ರಾ)09, ದಿನಾಂಕ: 02.02.2009, 17.12.2009
3. ಕೇಂದ್ರ ಸರ್ಕಾರದ ಅ.ಸ.ಪತ್ರದ ಸಂಖ್ಯೆ: ಖ. 12011/19/2008–ಎಸ್‌ಜಿಎಸ್‌ವೈ (ಟ್ರೈನಿಂಗ್), ದಿನಾಂಕ: 15.10.2009
4. ಲೀಡ್ ಡಿಸ್ಟ್ರಿಕ್ಟ್ ಮ್ಯಾನೇಜರ್, ಲೀಡ್ ಬ್ಯಾಂಕ್ ಆಫೀಸ್, ಚಿಕ್ಕಬಳ್ಳಾಪುರ ಇವರ ಪತ್ರ ಸಂಖ್ಯೆ: ಸಿಎಲ್ ಬಿ: ಸಿಬಿರೂಡ್ ಸೆಟಿ/650/2009, ದಿನಾಂಕ: 14.12.2009
5. ರೇಷ್ಮೆ ಜಂಟಿ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ತಾಂ8/ಸಬಿಕೋ/ಚಪುರ/ಕಟ್ಟಡ/ 19/09/–10, ದಿನಾಂಕ: 16.12.2009
6. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ ಪತ್ರದ ಸಂಖ್ಯೆ: ರೇಬೀರೇಕ್ಷೇ: ಬಿ.ಕೋ. ಚದ: 11:09–10,ದಿನಾಂಕ: 26–12–2009.
7. ಸರ್ಕಾರದ ಆದೇಶ ಸಂಖ್ಯೆ: ವಾಕೈ 33 ರೇಯೋವಿ 2009, ಬೆಂಗಳೂರು, ದಿನಾಂಕ 31.12.2009
8. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರ ಪತ್ರ ಸಂಖ್ಯೆ: ಜಿಪಂಚಿ: ಚದಲಪುರ: ಜಮೀನು ಹಸ್ತಾಂತರ: ಸಿಆರ್04:09–10, ದಿನಾಂಕ: 15.02.2010.
9. ರಾಜ್ಯ ಸರ್ಕಾರದ ಪತ್ರದ ಸಂಖ್ಯೆ: ಗ್ರಾಅಪ 2 ಎಸ್‌ಇಪಿ (ಇತರೆ) 10, ದಿನಾಂಕ:24.04.2010
10. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ತಿದ್ದುಪಡಿ ಸಂಖ್ಯೆ: ವಾಕೈ 33 ರೇಯೋವಿ 2009, ದಿನಾಂಕ: 15.05.2010

**ಪ್ರಸ್ತಾವನೆ:**

ರಾಷ್ಟ್ರದ ಎಲ್ಲಾ ಜಿಲ್ಲೆಗಳಲ್ಲಿ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು (R-SETI) ಲೀಡ್ ಬ್ಯಾಂಕ್‌ಗಳ ಮುಖಾಂತರ ಸ್ಥಾಪಿಸಲು ಕೇಂದ್ರ ಸರ್ಕಾರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಓದಲಾಗಿದೆ (1) ರ ಪತ್ರದ ದಿನಾಂಕ: 07–01–2009 ರ ಮಾರ್ಗಸೂಚಿಯಲ್ಲಿ ತಿಳಿಸಿರುತ್ತದೆ. ಇದರನ್ವಯ ರಾಜ್ಯ ಸರ್ಕಾರವು R-SETI ಸ್ಥಾಪನೆಗಾಗಿ ಉಚಿತವಾಗಿ ನಿವೇಶನ ಅಥವಾ 33 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಒದಗಿಸಬೇಕಾಗಿರುತ್ತದೆ. ಕೇಂದ್ರ ಸರ್ಕಾರವು ಖ–ಖಖಖಖ ಕಟ್ಟಡ ನಿರ್ಮಾಣ, ಪೀಠೋಪಕರಣ ಮತ್ತು ಯಂತ್ರೋಪಕರಣಗಳಿಗಾಗಿ ರೂ. 1.00 ಕೋಟಿ ಅನುದಾನವನ್ನು ನೀಡುತ್ತದೆ.

ಕೇಂದ್ರ ಸರ್ಕಾರದ ಆದೇಶದನ್ವಯ ಓದಲಾಗಿದೆ (2) ರ ದಿನಾಂಕ: 02.02.2009 ಪತ್ರದಲ್ಲಿ R-SETI ಯನ್ನು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸ್ಥಾಪಿಸಲು ಉಚಿತವಾಗಿ ನಿವೇಶನ ಅಥವಾ ಜಮೀನು ಒದಗಿಸುವಂತೆ, ಸರ್ಕಾರಿ ನಿವೇಶನ ಸಿಗದಿದ್ದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅನುದಾನದಿಂದಾಗಲಿ ಅಥವಾ ಕೈಗಾರಿಕಾ ಪ್ರದೇಶಗಳಲ್ಲಾಗಲಿ ನಿವೇಶನ ಒದಗಿಸುವಂತೆ ವಾಣಿಜ್ಯ ಮತ್ತು ಕೈಗಾರಿಕೆ ಪ್ರಧಾನ ಕಾರ್ಯದರ್ಶಿಗಳನ್ನು ಕೋರಲಾಗಿತ್ತು.

ಕೇಂದ್ರ ಸರ್ಕಾರವು ಓದಲಾಗಿದೆ (3)ರ ದಿನಾಂಕ:15.10.2009 ರಲ್ಲಿ ರಾಜ್ಯ ಸರ್ಕಾರಗಳು R-SETI ಸ್ಥಾಪನೆಗಾಗಿ ದಿನಾಂಕ: 31.12.2009 ರೊಳಗಾಗಿ ನಿವೇಶನ ನೀಡಲು ಸೂಚಿಸಿದನ್ವಯ ಓದಲಾಗಿದೆ (2) ರ ದಿನಾಂಕ:17.12.2009 ರಲ್ಲಿ ಜಮೀನನ್ನು ಉಚಿತವಾಗಿ ಅಥವಾ 33 ವರ್ಷಗಳ ಅವಧಿಗೆ ಗುತ್ತಿಗೆ ಮೇಲೆ ನೀಡುವಂತೆ ಮತ್ತೊಮ್ಮೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳನ್ನು ಕೋರಲಾಗಿತ್ತು.

ಓದಲಾಗಿದೆ (5) ರ ದಿನಾಂಕ: 16.12.2009 ರಲ್ಲಿ ರೇಷ್ಮೆ ಜಂಟಿ ನಿರ್ದೇಶಕರು, ಬೆಂಗಳೂರು ವಿಭಾಗ, ಇವರು ಚದಲಪುರ ಸರ್ಕಾರಿ ರೇಷ್ಮೆ ಬಿತ್ತನೆಕೋಠಿಯ ಸರ್ವೆ ನಂ.81 ರಲ್ಲಿರುವ 14 ಎಕರೆ ಜಮೀನಿನ ಪೈಕಿ ಹಾಲಿ ಖಾಲಿಯಿರುವ 2 ಎಕರೆ ಜಮೀನಿನಲ್ಲಿ ಯಾವುದೇ ಇಲಾಖಾ ಚಟುವಟಿಕೆಗಳು ನಡೆಯದೇ ಇರುವ ಪ್ರಯುಕ್ತ ತರಬೇತಿ ಕೇಂದ್ರವನ್ನು ಸ್ಥಾಪಿಸಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ನೀಡಬಹುದೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರಿಗೆ ಶಿಫಾರಸ್ಸು ಮಾಡಿರುತ್ತಾರೆ. ಇದರನ್ವಯ ಓದಲಾಗಿದೆ (6) ರ ದಿನಾಂಕ:26–12–2009 ರಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸದರಿ ಜಮೀನನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಹಸ್ತಾಂತರಿಸುವಂತೆ ಅವರ ಇಲಾಖಾ

ಕಾರ್ಯದರ್ಶಿಗಳನ್ನು ಕೋರಿರುತ್ತಾರೆ. ಇದರಂತೆ, ಓದಲಾಗಿದೆ (7) ರ ದಿನಾಂಕ 31.12.2009ರ ವಾಣಿಜ್ಯ ಮತ್ತು ಕೈಗಾರಿಕೆ ಇಲಖೆಯ ಆದೇಶದಂತೆ, ಸದರಿ ಜಮೀನನ್ನು 33 ವರ್ಷಗಳ ಅವಧಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಗುತ್ತಿಗೆ ಮೇಲೆ ನೀಡುವುದಕ್ಕೆ ಮಂಜೂರಾತಿ ನೀಡಿದೆ. ಓದಲಾಗಿದೆ (8)ರ ದಿನಾಂಕ: 15.02.2010ರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ ಇವರು ಜಮೀನು ಹಸ್ತಾಂತರ ಕರಾರು ಒಪ್ಪಂದ ಮಾಡಿಕೊಳ್ಳುವಾಗ ಸರ್ವೆ ನಂ.80 ರಲ್ಲಿರುವ 2 ಎಕರೆ ಜಮೀನಿನಲ್ಲಿ 1 ಕೊಳವೆ ಬಾವಿ ಇರುವುದರಿಂದ 1 ಗುಂಟೆ ಜಮೀನನ್ನು ಹೊರತುಪಡಿಸಿ ಉಳಿದ 1 ಎಕರೆ 39 ಗುಂಟೆ ಜಮೀನನ್ನು ಮಾತ್ರ ದಿನಾಂಕ:15.02.2010 ರಂದು ಇಲಾಖೆಗೆ ಹಸ್ತಾಂತರಿಸಿ ಕೊಂಡಿರುತ್ತಾರೆ. ಆದರೆ ಹಸ್ತಾಂತರ ಮಾಡಿಕೊಳ್ಳುವಾಗ ಆದೇಶದಲ್ಲಿ ತಿಳಿಸಿದ್ದ ಜಮೀನಿನ ಸರ್ವೆ ನಂ.81 ಕ್ಕೆ ಬದಲಾಗಿ ಸರ್ವೆ ನಂ. 80ರಲ್ಲಿ ಲಭ್ಯವಿರುವ 2 ಎಕರೆ ಜಮೀನನ್ನು ಹಸ್ತಾಂತರಿಸಿ ಕೊಂಡಿರುತ್ತಾರೆ. ಈ ರೀತಿ ಸರ್ವೆ ನಂ. ವ್ಯತ್ಯಾಸವಾದ ಕಾರಣ ಇದನ್ನು ಸರಿಪಡಿಸಿಕೊಳ್ಳಬೇಕಾದ್ದರಿಂದ, ಓದಲಾಗಿದೆ (9) ರ ದಿನಾಂಕ 24.4.2010ರ ಅನಧಿಕೃತ ಟಿಪ್ಪಣಿಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯವರನ್ನು ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ.81 ರಲ್ಲಿರುವ 14 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು ಎಂಬುದರ ಬದಲಾಗಿ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ.80 ರಲ್ಲಿರುವ 9.06 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನು ಎಂಬುದಾಗಿ ತಿದ್ದುಪಡಿ ಮಾಡಿ ಆದೇಶ ಹೊರಡಿಸುವಂತೆ ಕೋರಿತ್ತು. ಓದಲಾಗಿದೆ (10)ರ ದಿನಾಂಕ:15.05.2010ರಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ದಿನಾಂಕ: 31.12.2009ರ ಆದೇಶಕ್ಕೆ ಮೇಲ್ಕಂಡಂತೆ ತಿದ್ದುಪಡಿ ಮಾಡಿದೆ. ಆದಕಾರಣ ಕೆನರಾ ಬ್ಯಾಂಕ್ ರೂರಲ್ ಸೆಲ್ಫ್ ಎಂಪ್ಲಾಯ್ ಮೆಂಟ್ ಟ್ರೈನಿಂಗ್ ಇನ್ಸಿಟ್ಯೂಟ್‌ಗಾಗಿ ಸರ್ಕಾರಿ ಬಿತ್ತನೆ ಕೋಠಿಯ ಸರ್ವೆ ನಂ.80 ರಲ್ಲಿರುವ 9.06 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ಕೇಂದ್ರ ಸರ್ಕಾರದ ಸೂಚನೆಯಂತೆ 33 ವರ್ಷಗಳ ಲೀಸ್ ಆಧಾರದ ಮೇಲೆ ನೀಡಬೇಕಿದೆ. ಆದುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಇಪಿ (ಇತರೆ) 2010, ಬೆಂಗಳೂರು, ದಿನಾಂಕ:08–06–2010.**

ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಮಾರ್ಗಸೂಚಿಯನ್ವಯ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸ್ಥಾಪಿಸುವುದಕ್ಕೆ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್‌ನ ವಶದಲ್ಲಿರುವ ಚದಲಪುರ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಯ ಸರ್ವೆ ನಂ. 80 ರಲ್ಲಿರುವ 2 ಎಕರೆ ಜಮೀನಿನಲ್ಲಿ 1 ಕೊಳವೆ ಬಾವಿ ಇರುವುದರಿಂದ 1 ಗುಂಟೆ ಜಮೀನನ್ನು ಹೊರತುಪಡಿಸಿ ಉಳಿದ 1 ಎಕರೆ 39 ಗುಂಟೆ ಜಮೀನನ್ನು ಮಾತ್ರ 33 ವರ್ಷಗಳಿಗೆ ಗುತ್ತಿಗೆ ಆಧಾರದ ಮೇಲೆ ಕೆನರಾ ಬ್ಯಾಂಕ್ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ ಚಿಕ್ಕಬಳ್ಳಾಪುರ ಇವರಿಗೆ ಈ ಕೆಳಕಂಡ ಷರತ್ತು ನಿಬಂಧನೆಗಳೊಂದಿಗೆ 33 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಹಸ್ತಾಂತರಿಸಲು ಮಂಜೂರಾತಿ ನೀಡಿದೆ.

1. ನಿವೇಶನದಲ್ಲಿರುವ ಕೊಳವೆ ಬಾವಿಯ 1 ಗುಂಟೆ ಜಮೀನನ್ನು ಹೊರತುಪಡಿಸಿದೆ.
2. ಇಲಾಖೆಯ ಉಪಯೋಗಕ್ಕಾಗಿ ಉಳಿಸಿಕೊಂಡಂತಹ ಕೊಳವೆ ಬಾವಿಯ ಒಂದು ಗುಂಟೆ ಜಾಗದಲ್ಲಿ 5 ಅಡಿ ಎತ್ತರದ ಕಾಂಪೌಂಡನ್ನು ನಿರ್ಮಿಸಿ ಒಳಹೋಗಲು ಗೇಟಿನ ವ್ಯವಸ್ಥೆ ಮಾಡತಕ್ಕದ್ದು ಮತ್ತು ಕೊಳವೆ ಬಾವಿ ಚಾಲನೆ ಮತ್ತು ನಿವಾಹಣೆಗಾಗಿ ಹೋಗಿಬರಲು ಇಲಾಖೆಯ ಉಳಿಕೆ ಜಮೀನಿನ ಉತ್ತರ ಭಾಗದಲ್ಲಿ ಒಂದು ಗೇಟನ್ನು ನಿರ್ಮಿಸಿ ಕೊಡುವುದು.
3. ಜಮೀನಿಗೆ ಪ್ರತ್ಯೇಕ ಪ್ರವೇಶದ್ವಾರವನ್ನು, ಹಸ್ತಾಂತರಿಸಿರುವ ಜಮೀನಿನ ಪೂರ್ವಕ್ಕೆ ಅಳವಡಿಸಿಕೊಳ್ಳತಕ್ಕದ್ದು.
4. ಜಮೀನನ್ನು ಯಾವ ಉದ್ದೇಶಕ್ಕಾಗಿ ಪಡೆದಿದೆಯೋ, ಆ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು ತಪ್ಪಿದ್ದಲ್ಲಿ ಜಮೀನನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮರು ವರ್ಗಾಯಿಸತಕ್ಕದ್ದು.
5. ಜಮೀನಿನ ಯಾವುದೇ ಭಾಗವನ್ನು ಮಾರಾಟ ಮಾಡುವ ಅಥವಾ ಬಾಡಿಗೆ/ ಗುತ್ತಿಗೆ ನೀಡುವ ಅಧಿಕಾರವಿರುವುದಿಲ್ಲ.
6. ಪಡೆದ ಜಮೀನನ್ನು ಒತ್ತುವರಿಯಾಗದಂತೆ ಎಚ್ಚರಿಕೆ ವಹಿಸುವ ಜವಾಬ್ದಾರಿ ಕೆನರಾ ಬ್ಯಾಂಕ್ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ, ಚಿಕ್ಕಬಳ್ಳಾಪುರ ಇವರದ್ದಾಗಿರುತ್ತದೆ.
7. ಜಮೀನನ್ನು ಯಾವುದೇ ಕಾರಣದಿಂದ ಸಾಲ ಪಡೆಯಲು ಸಂಘ: ಸಂಸ್ಥೆಗಳು ಬ್ಯಾಂಕುಗಳಿಗೆ ಒತ್ತೆ ಇಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಕೆ. ರಂಗಸ್ವಾಮಿ**

ನಿರ್ದೇಶಕರು (ಸ್ವಉಕಾ)

PR. No 1516

ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## HORTICULTURE SECRETARIAT

**Sub :** "Scheme for Integrated Farming in Coconut for Productivity/Improvement with Coconut Development Board Assistance (100% CDB) 2401-00-108-2-35 (Plan)"-State Level Administrative Approval for the year 2010-11-reg.

**Read:** 1) G.O No. ತೋಇ 67 ತೋಯೋಕಾ 2010 dated 09-04-2010.
2)Letter of CDB F.No.223/2010-Dev dated 29.04.2010
3) G.O.No. ತೋಇ 74 ತೋಯೋಕಾ 2010 dated 02.05.2010
4) Letter of Director of Horticulture No. DH/PC/ AHO-2/1/2010-11 dated 03.05.2010.

**PREAMBLE:-**

1. The Scheme for Integrated Farming in Coconut for Productivity / Improvement with Coconut Development Board Assistance (100% CDB)" Head of Account 2401-00-108-2-35-100 (Financial Assistance/ Relief) has been continued during 2010-11 as an ongoing scheme with an outlay of Rs. 700.00 lakhs as per Government Order read at (1) above. The scheme to be implemented as per the guidelines to be issued Coconut Development Board.

2. Coconut Development Board has conveyed approval for an amount of Rs. 709.290 lakhs for implementing CDB assisted programmes during 2010-11 vide its letter read at (2) above. The following has been the sharing patern;

(Rs.in lakhs)

| Sl. No. | Agency | State Share | CDB share | Total |
|---|---|---|---|---|
| A | Programmes to be implemented by the State Department of Horticulture | 3.125 | 353.125 | 356.25 |
| B | Programmes to be implemented by the Coconut Development Board | - | 353.04 | 353.04 |
| | **GRAND TOTAL** | **3.125** | **706.165** | **709.29** |

3. The Director of horticulture in his letter read at (4) above has requested the Government to accord State Level Administrative Approval for CDB assisted programmes during 2010-11 to the tune of Rs. 1074.97 lakhs. This includes various components which requires revalidation from Coconut Development Board.

4. The proposal of the Diretor of Horticulture has been examined and hence this Order".

**GOVERNMENT ORDER NO: AHD 51 HPP 2010 BANGALORE, DATED: 10.06.2010.**

Government is pleased to accord The State Level Administrative Approval for implementing the Coconut Development Programmes during the year 2010-11with a total financial outlay of Rs. 709.29 lakhs. Component wise details are below:-

Coconut Development Board Schemes-2010-11

(Rs. In lakhs)

| Sl. No | Name of the scheme | TARGET | | | |
|---|---|---|---|---|---|
| | | Phy. | Fin. | | |
| | | | State Share | CDB Share | Total |
| **A** | **Programmes to be implemented by the State Department of horticulture** 1) Production and Distribution of planting Materials-production and Distribution of TXD hybrids and other released varieties(50:50 basis) | 25,000 Nos | 3.125 | 3.125 | 6.25 |
| | 2) Integrated farming in Coconut holding for Productivity improvement – Laying out demonstration plots | 1000 ha | - | 350.00 | 350.00 |
| | **TOTAL** | | 3.125 | 353.125 | 356.25 |

| | | | | | |
|---|---|---|---|---|---|
| **B** | **Programme to be implemented by the Coconut Development Board**<br>1) Production and Distribution of planting Materials – **Aid to private nurseries and seed gardens**<br>a) Seed garden (Big unit)<br>b) Nursery (Small unit)<br>2) Expanion of area under coconut<br>3) Integrated Farming in Coconut Holding for Productivity Improvement-<br>)Laying out of Demonstration plots<br>) Organic Manure Unit | 2Nos<br>5 Nos<br><br>200 ha<br>1000ha<br>25 units | -<br>-<br>-<br>-<br>- | 10.50<br>6.00<br>24.00<br>307.54<br>5.00 | 10.50<br>6.00<br>24.00<br>307.54<br>5.00 |
| | **TOTAL** | - | - | **353.04** | **353.04** |
| | **GRAND TOTAL** | | **3.125** | **706.165** | **709.29** |

2. The Expenditure towards the programmes to be implemented by the State Department of Horticulture will be met under the "scheme for Integrated Farming in Coconut for Productivity/Improvement with Coconut Development Board Assistance (100% CDB)" Head of Account 2401-00-108-2-35-100 (Financial Assistance/ Relief) to the tune of Rs. 356.125 lakhs.

3. The Director of Horticulture shall submit Utilization Certificate in respect of continuing scheme implemented during 2009-10. Any unspent balance as on 01.04.2010under each scheme sanctioned during the financial year 2009-10 including interest accured may be furnished to Coconut Development Board and obtained revalidation/ adjustments against funds released.

4. Allocation of 30%, 16% and 8% may be made to women, scheduled caste and scheduled tribe, respectively while implementing the scheme. Monthly and quarterly report of the schemes may be reported to Coconut Development Board on or before 10th of succeeding month.

5. In order to ensure the successful implementation of the scheme State Level Monitoring Committee has been constituted as below.

| | | |
|---|---|---|
| 1. | Secretary, Horticulture, Government of Karnataka | Chairman |
| 2. | Director of Horticulture, Government of Karnataka | Member |
| 3. | Director, Central Planting Crop Research institute, Kasaragodu. | Member |
| 4. | Vice-Chancellor, University of Horticultural Sciences,Bagalkote. | Member |
| 5. | Board Member (s), Coconut Development Board Representing the State of Karnataka | Member |
| 6. | Director, Coconut Development Board, Regional Office, Bangalore | Convener |

6. The Director of Horticulture shall ensure the following:-

a) In the case of production of TXD hybrid seedlings the details of male and female parent sources should be clearly indicated. The receipts accrued from the sale of seedings under the TXD schemes may also be intimated to Coconut Development Board without fail. These receipts are to be shared by the Board and the State Governments on-50:50 basis.

b) Under the area Expansion Programme,the source of planting materials shall be from the Nurseries of State Govt./CDB/CPCRI/CDB assisted Private Nurseries/ SAUs.

c) The basic yield data prior to the adoption of improved packages should be recorded from the plots identified for demonstration purpose.

d) The schemes 'laying out demonstration plots' & 'Establishment of organic manure units' will be implemented as per the approved pattern. Under the schemes 'Laying out demonstration plots'

financial assistance is limited to Rs 35,000/-Per hectare depending on the activities under taken in the gardens in two annual installments Necessary instructions shall be issued to the District Level Implementing officers to initiate action to implement the Integrated Farming Scheme on a cluster basis.While selecting the cluster, preference should be given for areas with high incidence of pests and diseases. Modalities/ Criteria to be followed for implementation of the integrated farming scheme on cluster basis are as below:-

- A compact area approach with an extent of 25 ha. Shall be selected by implementation of integrated farming scheme. All the small and marginal farmers coming under the cluster should be considered as beneficiaries of the programme based on the suitability of their coconut gardens irrespective of size of land holding.
- Conduct base line survey to record the present status of the crop and status of farmers before implementation of the projects. Data should be analyzed, and properly documented.
- Preference should be given to groups, which are promoted or supported by NGO/Community based organization/ Co-op societies etc.
- Cluster should have a technical resource group for monitoring and implementation of the different components of the programme This resource group should visit different areas in the cluster in fixed days in a month. The resource group should consits of the field level functionaries of the Horticulture Department, the Agricultural University, Coconut Development Board officials and scientists from Research Stations.
- A farmer leader should be identified for each group in the project area and the leader should be trained on all technologies to be adopted in the project area.
- The possibility of promoting farm level processing in the project area is to be ascertained and economically desirable coconut products are to be promoted through the groups.
- The technical programme and the calendar of operations for the year 2010-11 shall be prepared and distributed to the beneficiaries immediately for making arrangements for supply of inputs and timely adoption of the management practices.
- Supply of quality coconut seedings is to be ensured in the selected clusters of new planting/under planting. Their groups shall be promoted for production of quality seedlings by procuring seed nuts from the disease tolerant mother palm available in the project area .The mother palms selected in the root wilt affected areas shall be subjected to serological test at CPCRI as far as possible.

e) Under the scheme Organic Manure Unit, financial assistance is extended to popularize the use of Organic Manure in coconut holdings Financial assistance is extended at the rate of Rs. 20,000/- limited to 50% of the fixed and maintenance cost (size=15m X 1.5m X 0.70m).However, smaller units may be promoted and financial assistance may be reduced accordingly.

7. Releases will be made as and when Coconut Development Board provides funds.

8. The Director of Horticulture shall give wide publicity to the technology mission on coconut and identify, formulate and forward suitable projects to be proposed to Coconut Development Board as per the guidelines under the Technology Mission on Coconut.

9. This Order issues with the concurrence of Internal Financial Advisor, Agriculture and Horticulture Department vide Note No. ತೋಇ 23 ಆಂಆಸ 2010 dated 05.06.2010.

By order and in the name of the Governor of Karnataka

P.R.NO.1517

**S.RAJU**
Under Secretary to Government,
Horticulture Department.

**RURAL DEVELOPMENTS AND PANCHAYAT RAJ SECRETARIAT**

**Sub:** Constitution of Core Group National Rural Livelihoods Mission (NRLM) in Karnataka-Reg.

**Read:** Govt. of India, Ministry of Rural Development, New Delhi D.O. Ltr. No.13015/01/2010-SGSY-I dated 25-05-2010.

**PREAMBLE:-**

Swarna Jayanthi Swarozgar Yojana (SGSY) a centrally sponsored scheme designed to promote self employment oriented income generating activities for the BPL households is being implemented from 01-04-1999. Based on several evaluation studies reports and given the overarching objective of reduction in rural proverty in all its forms by 2015, the Ministry of Rural development, Government of India, New Delhi intends to restructure SGSY Scheme in to "National Rural Liveli hoods Mission (NRLM)" The Mission will aim "to reduce poverty through promotion of diversified and gainful self employment and skilled wage employment opportunities resulting in appreciable increase in incomes of the rural poor on sustainable basis". The Ministry of rural Development has instructed to constitute a core group of six to eight expert in order to implement the Mission successfully. The Core group has to be constituted from the officers drawn from key Departments, Government Agencies/ Corporation, Externally Aided Projects and NGOs operating and two Project Directors of DRDA where the SGSY is being successfully implemented. In view of this State Government has to constitute the core group. Hence this Order.

***GOVERNMENT ORDER NO.RDP 31 SJY2009, BANGALORE,DATED: 09-06-2010***

In the above circumstances Government of Karnataka is pleased to constitute a Core-Group for the successful implementation of National Rural Livelihoods Mission (NRLM) in the state. The Committee will have members as indicated below:

| | | |
|---|---|---|
| 1) | Sri D.K. Rangaswamy,<br>Director (SEP) & E/o Addl. Secretary to Government,<br>Rural Development & Pan Raj Department, Bangalore | Chairman & Convener |
| 2) | Smt M.M. Bindu,<br>Joint Director, Stree Shakthi, women & Child Development Department,M.S. Building, Bangalore | Member |
| 3) | Sri.M. Suguna Murthy,<br>Jiont Director, District Indusries Centre, Mandya | Member |
| 4) | Sri G.N. Shiva Murthy,<br>Deputy Director, (R&S)<br>Department of Employment & Training, Bangalore | Member |
| 5) | Sri P.A. Gopal,<br>Project Director (DRDA), Zilla Panchayat, Mysore | Member |
| 6) | Sri R.Amaresh Naik,<br>Project Director (DRDA), Zilla Panchayat, Gulbarga | Member |
| 7) | Smt. Lathamala,<br>Programme Officer, Training and Head Vocational Education,<br>MYRADA, No.2, Service Road, Domlur Layout Bangalore. | Member |
| 8) | Sri Udayakumar holla,<br>Lead District manager, Syndicate Bank, D. Kannada | Member |
| 9) | Sri H. Prakash,<br>Joint Director (SEP), Rural Development & Panchayat Raj Department, Bangalore | Member Secretary |

***The Functions of State Level Core group:***

- The Committee will meet as and when necessary.
- To suggest the specific based strategy under the board framework of NRLM Guidelines.
- To suggest for Setting up of a dedicated professional support structure from the Block level / District level as per the State's requirements.
- To assist in rolling out the State Action plan.

- The Members of Core Group should undergo continuous capacity building as per instructions of MoRD, Government of India, New Delhi.

***Conditions:***

- The all the members of constitute Core Group will continue to render service in the implementation of NRLM in whatever capacity and designation they are placed in the respective Government /field for a period of 2 to 3 years.
- All the above members will continue until further Orders.

By order and in the name of the Governor of Karnataka

**P.R.NO.1518**

**D.K. Rangaswamy**
Director (SEP) & E/O
Addl. Secretary to Government,
Rural Development & Pan. Raj Department.

**HEALTH AND FAMILY WELFARE SECRETARIAT**

**ADDENDUM**

*********

No: FWS/50/D&E/ 2009-10 Date: 04.06.2010.

In the Government Order No: FWS/50/D&E/ 2009-10 Bangalore dated: 26.02.2010 in operative portion, after 2nd para in table, serial No-3, shall be read as follows:

| Sl.No. | Level | Designation | Jurisdiction |
|---|---|---|---|
| 3 | District Head quarters | i. District Health and family Welfare Officer<br>ii. Assistant Statistical Officer | District Nodal M&E Officer<br>District Assistant Nodal M&E Officer |

By Order and in the name of the Governor of Karnataka

**P.R.NO.1519**

**(M. SHASHIDHAR)**
Deputy Secretary to Govt
KHSDRP
Health and Family welfare Department.

**COMMERCE AND INDUSTRIES SECRETARIAT**

NO. CI 99 SPI 2009, BANGALORE, DATED 10TH JUNE 2010

**CORRIGENDUM**

**Sub :** Constitution of State Level Co-ordination Committee for Administration of New Industrial Policy 2009-14.

**Ref :** 1. G.O. No. CI 99 SPI 2009 dated 18-03-2010
2. Proceedings of the SLCC meeting held on 24.04.2010.
3. Letter dated 12-05-2010 of the Joint Director (ID), Industries and Commerce Department Bangalore.

In the Government Order cited under reference (1), reconstituting the State Level Co-ordination Committee for administration and interpretation of New Industrial Policy 2009-14, at Sl. No. (8), it may please be read as Secretary, Law, Justice and Human Rights Department as member in place of Additional Secretary, Law, Justice and Human Rights Department.

This comes into force from the day of issuing this order.

By Order and in the name of the Governor of Karnataka

**APARNA PAVATE**
Desk Officer (Technical Cell)
Commerce & Industries Department.

P.R. 1520

## COMMERCE AND INDUSTRIES SECRETARIAT

**Sub :** Approval to the Project Proposal of M/s. Hospet Coke and Energy Pvt. Ltd. to establish a "Low Ash Metallurgical Coke of 2,40,000 TPA and 20 MW Waste Heat Recovery Power Plant" in Bellary District.

**Read :** Proceedings of the 22nd State High Level Clearance Committee (SHLCC) Meeting held on 24-05-2010.

**Preamble :**

M/s. Hospet Coke and Energy Pvt. Ltd. proposes establish a "Low Ash Metallurgical Coke of 2,40,000 TPA and 20 MW Waste Heat Recovery Power Plant" in Bellary District. With an investment of Rs. 212 crores, generating employment to about 172 persons.

In the 22nd State High Level Clearance Committee (SHLCC) Meeting held on 24-5-2010, the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-5-2010, in all aspects.

Hence the following Order.

**GOVERNMENT ORDER NO. : CI 215 SPI 2010, BANGALORE, DATED : 02-06-2010**

Government is pleased to accord in principle approval to the Project Proposal of M/s. Hospet Coke and Energy Pvt. Ltd. to establish a "Low Ash Metallurgical Coke of 2,40,000 TPA and 20 MW Waste Heat Recovery Power Plant" in Bellary District. With an investment of Rs. 212 crores, generating employment to about 172 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 100 acres in Vijayangara Area Development Authority in Bellary, Hospet and Sandur Taluks.
2. **Water :** 0.77 MGD of water from VADA, subject to availability.
3. **Power :** 1100 KVA to be serviced by GESCOM till the commencement of power generation.
4. **Incentives and Concessions :** As per applicable Industrial Policy of the State.

**GENERAL TERMS AND CONDITIONS :**

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a. The project proponents shall provide employment to at least one member of the family of each land looser as the land is being acquired through VADA.
   b. The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

c. The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**APARNA PAVATE**

P.R. 1521

Desk Officer (Technical Cell)
Commerce & Industries Department.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ :** ಬಾಗಲಕೋಟೆ ಜಿಲ್ಲೆಯ ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿಯಲ್ಲಿ ನಡೆದಿರುವ ಅಕ್ರಮ ಕುರಿತು ಶ್ರೀ ವಿ. ದೊರೆಸ್ವಾಮಿ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಹಾಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ ಹಾಗೂ ಶ್ರೀಮತಿ ಭಾರತಿ ಆರ್.ಶೆಟ್ಟರ್, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಮಖಂಡಿ, ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಹುಬ್ಬಳ್ಳಿ ಗ್ರಾಮೀಣ, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ – ಅಂತಿಮ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಮಮಇ 18 ಐಸಿಡಿ 2007 ದಿನಾಂಕ: 21–06–2007.
2. ಸರ್ಕಾರದ ಆದೇಶ ಸಂಖ್ಯೆ: ಮಮಇ 18 ಐಸಿಡಿ 2007 ದಿನಾಂಕ: 03–11–2007.
3. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 590 ಎಸ್‌ಜೆಡಿ 2008 ದಿನಾಂಕ 20–02–2009.
4. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ವಿ. ದೊರೆಸ್ವಾಮಿ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಹಾಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ, ಇವರು ದಿನಾಂಕ 12–03–2009 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.
5. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀಮತಿ ಭಾರತಿ ಆರ್. ಶೆಟ್ಟರ್, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಮಖಂಡಿ, ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಹುಬ್ಬಳ್ಳಿ ಗ್ರಾಮೀಣ, ಇವರು ದಿನಾಂಕ 12–03–2009 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.
6. ಸರ್ಕಾರದ ಆದೇಶ ಸಂಖ್ಯೆ: ಮಮಇ 590 ಎಸ್‌ಜೆಡಿ 2008 ದಿನಾಂಕ: 13–03–2010.
7. ವಿಚಾರಣಾಧಿಕಾರಿಯಾದ ಶ್ರೀ ಎ.ಎ. ಹುಲಗೇರಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಪತ್ರ ದಿನಾಂಕ: 07–12–2009,
8. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 29 ಎಸ್‌ಜೆಡಿ 2010 ದಿನಾಂಕ 22–01–2010.
9. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ವಿ. ದೊರೆಸ್ವಾಮಿ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಹಾಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ, ಇವರು ದಿನಾಂಕ 03–02–2010 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.
10. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀಮತಿ ಭಾರತಿ ಆರ್. ಶೆಟ್ಟರ್, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಮಖಂಡಿ, ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಹುಬ್ಬಳ್ಳಿ ಗ್ರಾಮೀಣ, ಇವರು ದಿನಾಂಕ 22–02–2010 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 21–06–2007ರ ಆದೇಶದಲ್ಲಿ ಅಂಗನವಾಡಿ ಕೇಂದ್ರಗಳ ಸಮೇತ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳಿಗೆ ಸರ್ಕಾರವು ಮಂಜೂರಾತಿ ನೀಡಿದೆ. ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 03–11–2007ರ ಆದೇಶದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಆಯ್ಕೆ ಕುರಿತು ಹೊರಡಿಸಿರುವ ಮಾನದಂಡಗಳನ್ನು ಪರಿಷ್ಕರಿಸಿ, ಸರ್ಕಾರವು ಆದೇಶಿಸಿದೆ.

ದಿನಾಂಕ 21–06–2007 ರ ಸರ್ಕಾರದ ಆದೇಶದಂತೆ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ್ತು ಮುಧೋಳ್ ತಾಲ್ಲೂಕಿನ ಕೆಲವು ಅಂಗನವಾಡಿಗಳಿಗೆ, ಅಂಗನವಾಡಿ ಕಾರ್ಯಕರ್ತೆಯರನ್ನು ಮತ್ತು ಅಂಗನವಾಡಿ ಸಹಾಯಕಿಯರನ್ನು ಆಯ್ಕೆ ಮಾಡಬೇಕಾಗಿದ್ದು, ಅಂಗನವಾಡಿ ಕಾರ್ಯಕರ್ತೆಯರ ಸಮಿತಿಯ ಮಾರ್ಗಸೂಚಿಗಳನ್ನು ಸರಿಯಾಗಿ ಅರ್ಥೈಸಿಕೊಳ್ಳದೆ, ಆಯ್ಕೆಯ ಪ್ರಕ್ರಿಯೆಗಳನ್ನು ಸರಿಯಾಗಿ ಪಾಲಿಸದೇ ನಿಯಮಗಳನ್ನು ಉಲ್ಲಂಘಿಸಿ ಸ್ಥಳೀಯ ಶಾಸಕರ (ವಿಧಾನ ಪರಿಷತ್ತಿನ ಸದಸ್ಯರು) ಅನುಮೋದನೆ ಇಲ್ಲದೆ ನಿಯಮ ಬಾಹಿರವಾಗಿ ನೇಮಕಾತಿಯನ್ನು ಇತ್ಯರ್ಥಪಡಿಸಿದ ಪರಿಣಾಮವಾಗಿ ನೇಮಕಾತಿ ಪ್ರಕ್ರಿಯೆಯಲ್ಲಿ ಗೊಂದಲ ಉಂಟಾಗಿ ಸ್ಥಳೀಯ ಶಾಸಕರ ಹಕ್ಕು ಚ್ಯುತಿಗೆ ಕಾರಣವಾಗಿರುವ ಹಿನ್ನಲೆಯಲ್ಲಿ ಹಾಗೂ ಸರ್ಕಾರವು ವಿಧಾನ ಪರಿಷತ್ತಿನ ಹಕ್ಕು ಬಾಧ್ಯತಾ ಸಮಿತಿಯ ಮುಂದೆ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸಲು ಶ್ರೀ ವಿ.ದೊರೆಸ್ವಾಮಿ, ಉಪನಿರ್ದೇಶಕರು, ಹಾಗೂ ಶ್ರೀಮತಿ ಭಾರತಿ ಆರ್.ಶೆಟ್ಟರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಕಾರಣರಾಗಿರುವುದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನಲೆಯಲ್ಲಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ ಮೇಲೆ (3) ರಲ್ಲಿ ಓದಲಾದ ದಿನಾಂಕ 20–02–2009 ರಂದು ಸದರಿ ಅಧಿಕಾರಿಗಳಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 11 ರಡಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ 12–03–2009 ರಂದು ಶ್ರೀ ವಿ.ದೊರೆಸ್ವಾಮಿ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ ಹಾಗೂ ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ 12–03–2009 ರಂದು ಶ್ರೀಮತಿ ಭಾರತಿ ಆರ್.ಶೆಟ್ಟರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹುಬ್ಬಳ್ಳಿ (ಗ್ರಾಮೀಣ), ಇವರುಗಳು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರಗಳಲ್ಲಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದು, ಪರಸ್ಪರರ ಮೇಲೆ ಆರೋಪ ಹೊರಿಸಿದ್ದು, ಅವರ ಉತ್ತರಗಳು ಸಮರ್ಪಕವಾಗಿಲ್ಲವೆಂದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಈ ಬಗ್ಗೆ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಸದರಿ ಅಧಿಕಾರಿಗಳ ವಿರುದ್ಧ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರ ಮೇರೆಗೆ ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ ಶ್ರೀ ಎ.ಎ.ಹುಲಗಿರಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 2ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಶಿವಗೇರಿ, ಧಾರವಾಡ–580 001, ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀ ಎನ್. ಮುನಿರೆಡ್ಡಿ, ಉಪನಿರ್ದೇಶಕರು (ತರಬೇತಿ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ 13–03–2009 ರಂದು ಆದೇಶ ಹೊರಡಿಸಿದೆ.

ಸರ್ಕಾರದ ದಿನಾಂಕ 13–03–2009ರ ಆದೇಶದಂತೆ ವಿಚಾರಣಾಧಿಕಾರಿಗಳಾದ ಶ್ರೀ ಎ.ಎ. ಹುಲಗಿರಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಚಾರಣೆ ನಡೆಸಿ ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ 07–12–2009 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾಧಿಕಾರಿಗಳ ವರದಿಯನ್ವಯ ಕ್ರಮ ಕೈಗೊಳ್ಳುವ ಪೂರ್ವದಲ್ಲಿ ಆರೋಪಿತ ಅಧಿಕಾರಿಗಳಿಗೆ ಅದರ ಪ್ರತಿಯನ್ನು ಕಾರಣ ಕೇಳುವ ನೋಟೀಸಿನ ಮುಖಾಂತರ ಜಾರಿ ಮಾಡಿ ಅವರ ವಿವರಣೆಯನ್ನು ಪಡೆದು ಪರಿಶೀಲಿಸಬೇಕಾಗಿರುವುದರಿಂದ ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ 22–01–2010 ರಂದು ಸದರಿ ಅಧಿಕಾರಿಗಳಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ವಿಚಾರಣಾಧಿಕಾರಿಗಳ ವರದಿಯನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ದಿನಾಂಕ 03–02–2010 ರಂದು ಶ್ರೀ ವಿ. ದೊರೆಸ್ವಾಮಿ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಹಾಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ ಇವರು ನೀಡಿರುವ ಲಿಖಿತ ಸಮಜಾಯಿಷಿಯಲ್ಲಿ ವಿಚಾರಣಾಧಿಕಾರಿಗಳ ಬಗ್ಗೆ ಯಾವುದೇ ಪ್ರತಿಕ್ರಿಯೆ ವ್ಯಕ್ತ ಪಡಿಸಿರುವುದಿಲ್ಲ. ಹಾಗೂ ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ದಿನಾಂಕ 22–02–2010 ರಂದು ಶ್ರೀಮತಿ ಭಾರತಿ ಆರ್. ಶೆಟ್ಟರ್, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಮಖಂಡಿ, ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹುಬ್ಬಳ್ಳಿ ಗ್ರಾಮೀಣ ಇವರು ನೀಡಿರುವ ಲಿಖಿತ ಸಮಜಾಯಿಷಿಯಲ್ಲಿ ವಿಚಾರಣಾಧಿಕಾರಿಗಳ ಬಗ್ಗೆ ಪ್ರತಿಕಿಯೆ ವ್ಯಕ್ತಪಡಿಸದೇ ಇಲಾಖಾ ವಿಚಾರಣೆ ಮುಗಿದ ನಂತರ ವಿಚಾರಣಾಧಿಕಾರಿಗಳ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ವಿಚಾರಣಾಧಿಕಾರಿಗಳ ವರದಿ, ಅಪಾದಿತ ಅಧಿಕಾರಿಗಳು ನೀಡಿರುವ ಲಿಖಿತ ಹೇಳಿಕೆಗಳು ಹಾಗೂ ತತ್ಸಂಬಂಧದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 29 ಎಸ್‌ಜಿಡಿ 2010, ಬೆಂಗಳೂರು, ದಿನಾಂಕ : 02–06–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ವಿ.ದೊರೆಸ್ವಾಮಿ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಇವರು ತಮ್ಮ ಕರ್ತವ್ಯದಲ್ಲಿ ಉಸ್ತುವಾರಿ ಮಾಡುವುದನ್ನು ಲಘುವಾಗಿ ಪರಿಗಣಿಸಿ ಇವರು ಯಾವುದೇ ಜವಾಬ್ದಾರಿಯನ್ನು ಸಕ್ರಿಯವಾಗಿ ನಿರ್ವಹಿಸದೇ ಇರುವುದು ಸಾಬೀತಾಗಿರುವುದರಿಂದ ಹಾಗೂ ಆಯ್ಕೆ ಪ್ರಕಟಣೆಯಿಂದ ಹಿಡಿದು ಆದೇಶ ಹೊರಡಿಸುವವರೆಗಿನ ಎಲ್ಲಾ ಹಂತಗಳ

ಮೇಲ್ವಿಚಾರಣೆ ಮಾಡುವುದು ಮಾರ್ಗದರ್ಶನ ನೀಡುವುದು, ನಿಯಂತ್ರಣಾಧಿಕಾರಿಗಳ ಕರ್ತವ್ಯವಾಗಿರುವುದರಿಂದ ಒಟ್ಟಾರೆ ನೇಮಕಾತಿ ಪ್ರಕ್ರಿಯೆ, ನಿಯಮಾನುಸಾರ ಆಗದಿರುವುದು, ವಿಳಂಬವಾಗಿರುವುದಕ್ಕೆ ನಿಯಂತ್ರಣ ಮತ್ತು ಮೇಲ್ವಿಚಾರಣಾಧಿಕಾರಿಗಳು ಜವಾಬ್ದಾರರಾಗಿದ್ದು, ತಮ್ಮ ಕರ್ತವ್ಯಲೋಪ ಎಸಗಿರುವ ಹಿನ್ನಲೆಯಲ್ಲಿ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವ.ನಿ.ಅ) ನಿಯಮಗಳು 1957 ರ ನಿಯಮ 8 (III) ರಂತೆ ಅವರ 2 ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಸಂಚಿತ ಪರಿಣಾಮವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ.

ಮುಂದುವರೆದು ಶ್ರೀಮತಿ ಭಾರತಿ ಆರ್.ಶೆಟ್ಟರ್, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಮಖಂಡಿ, ಇವರು ಸದಸ್ಯ ಕಾರ್ಯದರ್ಶಿಯಾಗಿ ಆಯ್ಕೆ ಪ್ರಕ್ರಿಯೆಯಲ್ಲಿ ಲೋಪಗಳನ್ನು ಮಾಡಿರುವುದು ಅಲ್ಲದೆ ಇವರು ಸದಸ್ಯ ಕಾರ್ಯದರ್ಶಿಯಾಗಿ ನಡವಳಿಯನ್ನು ಸರಿಯಾಗಿ ನಿರ್ವಹಿಸದೇ ಇದ್ದು ಅವರ ಮೇಲಿನ 7 ಆರೋಪಗಳಲ್ಲಿ 2 ಆರೋಪಗಳು ಸಾಬೀತಾಗಿ ಇನ್ನುಳಿದ 5 ಆರೋಪಗಳು ಸಾಬೀತಾಗಿಲ್ಲದಿರುವುದರಿಂದ ಇವರು ಎಸಗಿರುವ ಲೋಪಗಳಿಂದ ಯಾವುದೇ ಅಭ್ಯರ್ಥಿಗಳು ಆಯ್ಕೆ ಸಮಿತಿಯಲ್ಲಿ ಕಾನೂನು ಬಾಹಿರವಾಗಿ ಆಯ್ಕೆಯಾಗದಿರುವ ಹಾಗೂ ನ್ಯಾಯಾಲಯಕ್ಕೆ ಮೊರೆ ಹೋಗದೆ ಇರುವ ಹಿನ್ನಲೆಯಲ್ಲಿ ಸದರಿಯವರಿಗೆ ಈ ಹಿಂದಿನ ಘಟನೆಗಳು ಮರುಕಳಿಸದಂತೆ ಕರ್ತವ್ಯದಲ್ಲಿ ಲೋಪವೆಸಗದೆ ಕಾರ್ಯ ನಿರ್ವಹಿಸುವಂತೆ ಸೂಚಿಸಿ, ಈ ರೀತಿ ಮತ್ತೊಮ್ಮೆ ಕರ್ತವ್ಯ ಲೋಪವೆಸಗಿದಲ್ಲಿ ಮುಂದಿನ ಶಿಸ್ತು ಕ್ರಮ ಕೈಗೊಳ್ಳಲಾಗುವುದೆಂದು ಎಚ್ಚರಿಕೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 1522

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## COMMERCE AND INDUSTRIES SECRETARIAT

**Sub :** Approval to the Project Proposal of M/s. P.M. Energy Pvt. Ltd. to establish “500 MW Thermal Power Plant” at Basavana Bagewadi Taluk, Bijapur District.

**Read :** Proceedings of the 22nd State High Level Clearance Committee (SHLCC) Meeting held on 24-5-2010.

**Preamble :**

M/s. P.M. Energy Pvt. Ltd. Proposes to establish “500 MW Thermal Power Plant” at Mulvad Village, Basavana Bagewadi Taluk, Bijapur District, with an investment of Rs. 1889.09 crores, generating employment to about 770 persons.

In the 22nd State High Level Clearance Committee (SHLCC) Meeting held on 24-05-2010, the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-05-2010, in all aspects.

Hence the following Order.

**GOVERNMENT ORDER NO. : CI 214 SPI 2010, BANGALORE, DATED : 02-06-2010**

Government is pleased to accord in principle approval to the Project Proposal of M/s. P.M. Energy Pvt. Ltd. to establish “500 MW Thermal Power Plant” at Mulvad Village, Basavana Bagewadi Taluk, Bijapur District, with an investment of Rs. 1889.09 crores, generating employment to about 770 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land** : 800 acres – KIADB to acquire and allot as SUC in Mulvad Village, Basavana Bagewadi Taluk, Bijapur District, subject to availability.
2. **Water :** 32.50 MGD of water from the nearest water source subject to approval of the Water Resources Department.
3. **Power :** Not required.
4. **Incentives and Concessions :** As per applicable Energy Policy of the State.

**GENERAL TERMS AND CONDITIONS :**

1. **MOU :** The project proponents will have to sign a MOU with the Government of Karnataka during the Global Investors Meet in June 2010.

2. **Power Purchase :** The project proponent should make arrangements with KPTCL to supply at least 30% of generated power to the State Grid through PPA with respective ESCOM and approach KERC for price fixation.
3. **Environment :** The promoters to obtain CFE and CFO from KSPCB and environmental clearance from MOEF, GOI.
4. **Employment :** The company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
5. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
6. **Social Infrastructure Development :** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
7. **Others :**
    a) The project proponents shall provide employment to at least one member of the family of each land looser as the land is being acquired through KIADB.
    b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
    c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**APARNA PAVATE**

P.R. 1523

Desk Officer (Technical Cell)
Commerce & Industries Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಮಾನ್ಯ ಶಾಸಕರುಗಳ ಆಪ್ತ ಸಹಾಯಕರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 177 ಆಹಿಸೇ 2009 ದಿನಾಂಕ 23–02–2010.

2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 544 ಆಹಿಸೇ 2008 ದಿನಾಂಕ 29–01–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಗ್ರೂಪ್ ಸಿ ವೃಂದದಲ್ಲಿ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರು/ಶೀಘ್ರಲಿಪಿಗಾರರಿಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಅವರ ವಿದ್ಯಾರ್ಹತೆಗನುಗುಣವಾಗಿ ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರು/ದ್ವಿತೀಯ ದರ್ಜೆ ಸಹಾಯಕರ/ ಶೀಘ್ರಲಿಪಿಗಾರರ ಹುದ್ದೆಗಳಿಗೆದುರಾಗಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(vii) ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ಸರ್ಕಾರದಿಂದ ಅನುಮೋದಿಸಲ್ಪಟ್ಟ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅವಕಾಶ ನೀಡಲಾಗಿದೆ. ಮೇಲೆ ಓದಲಾದ (2)ರ ಅಧಿಕೃತ ಜ್ಞಾಪನದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯ, ಸಚಿವರ ಆಪ್ತ ಶಾಖೆ, ವಿಧಾನ ಪರಿಷತ್ತು/ಸಭೆ; ರಾಜ್ಯ ಸಭೆ/ಲೋಕ ಸಭೆ ಸದಸ್ಯರ ಆಪ್ತ ಸಿಬ್ಬಂದಿ ಶಾಖೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ

ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಗುತ್ತಿಗೆ ಆಧಾರದ ಮೇಲೆ ನೇಮಕಗೊಳ್ಳುವ ಮಾನ್ಯ ಶಾಸಕರ ಆಪ್ತ ಸಹಾಯಕರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಆಡಳಿತ ಹಿತದೃಷ್ಟಿಯಿಂದ ಸಂಬಂಧಪಟ್ಟ ಜಿಲ್ಲಾಧಿಕಾರಿಗಳೇ ಹೊರಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 123 ಆಹಿಸೇ 2010, ಬೆಂಗಳೂರು, ದಿನಾಂಕ : 21–05–2010**

ಸೂಕ್ತ ಪರಿಶೀಲನೆಯ ನಂತರ ಗ್ರೂಪ್ ಸಿ ವೃಂದದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(vii) ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಕಗೊಂಡಿರುವ ನೌಕರರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಅನುಬಂಧದಲ್ಲಿರುವಂತೆ ನೇಮಕ ಮಾಡಿರುವ ಹುದ್ದೆಗೆ ನಿಗದಿಪಡಿಸಿರುವ ಸಂಚಿತ ವೇತನದಲ್ಲಿ ಆದೇಶ ಹೊರಡಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅವಕಾಶ ನೀಡಿ ಆದೇಶಿಸಲಾಗಿದೆ.

ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಕಗೊಳ್ಳುವ ನಿಗಮ: ಮಂಡಳಿ ಸ್ಥಳೀಯ ಸಂಸ್ಥೆಗಳು: ಸ್ವಾಯುತ್ತ: ಶಾಸನಬದ್ಧ ಸಂಸ್ಥೆಗಳ ಗ್ರೂಪ್ ಸಿ ನೌಕರರ ನೇಮಕಾತಿ ಷರತ್ತು ನಿಬಂಧನೆಗಳನ್ನು ಹೊರಡಿಸಲು ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಸರ್ಕಾರಕ್ಕೆ ಕಳುಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುಕ್ಮಿಣಿ ದಿವಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–1)

## ಅನುಬಂಧ

## ಗುತ್ತಿಗೆ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳು

1. ____________ ಜಿಲ್ಲಾಧಿಕಾರಿಗಳ ಆದೇಶ ಸಂಖ್ಯೆ ____________ ದಿನಾಂಕ ____________ ರಲ್ಲಿ ________ ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇರೆಗೆ ನೇಮಕ ಮಾಡಿರುವ ಶ್ರೀ/ಶ್ರೀಮತಿ ______________ ಇವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ ____________ ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಶ್ರೀ ________________ ಮಾನ್ಯ ಶಾಸಕರು, ______________ ವಿಧಾನಸಭಾ /ವಿಧಾನಪರಿಷತ್ತು ಕ್ಷೇತ್ರ ಇವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಒಪ್ಪಂದದ ನೇಮಕಾತಿಗೆ ಕ್ರೋಢಿಕೃತ ಮಾಸಿಕ ಸಂಬಳ ರೂ. __________ (_________ ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಲಾಗಿದೆ. ಇದಲ್ಲದೆ ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಇವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರ ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಒಪ್ಪಂದದ ನೌಕರರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ವೈದ್ಯಕೀಯ ಕಾರಣಗಳ ಮೇರೆಗಾಗಲಿ ಅಥವಾ ಬೇರೆ ಕಾರಣಗಳಿಂದಾರಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು ವೈದ್ಯಕೀಯ ಕಾರಣಗಳ ಮೇರೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರು ಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯಲ್ಲಿ ಕರ್ತವ್ಯ ರಹಿತ ದಿನಗಳೆಂದು (ಡೈಸ್ ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಧರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಒಪ್ಪಂದದ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಇವರು ತಮ್ಮ ಕರ್ತವ್ಯ, ಕಾರ್ಯ, ಪ್ರಕಾರ್ಯಗಳನ್ನು ಶ್ರದ್ದೆ, ಭಕ್ತಿ, ಮತ್ತು ಆಸಕ್ತಿಯಿಂದ ನಿರ್ವಹಿಸತಕ್ಕದ್ದು.
11. ಇವರು ತಮ್ಮ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
12. ಇವರು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಬದ್ದರಾಗಿರತಕ್ಕದ್ದು.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಇವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂದಿಸಿದಂತೆ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ 50 ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಒಪ್ಪಿಸತಕ್ಕದ್ದು.

ಪಿ. ಆರ್. 1524

## COMMERCE & INDUSTRIES SECRETARIAT

**Sub :-** Approval to the Project Proposal of M/s. Scotts Garments Ltd., & Bombay Rayon Fashions Ltd., to establish a "Ready Made Garments unit" at Doddaballapura, Hassan & Kolar Districts.

**Read :-** Proceedings of the 22nd State High Level Clearance Committee (SHLCC) meeting held on 24-05-2010.

**Preamble:**

M/s. Scotts Garments Ltd., & Bombay Rayon Fashions Ltd., propose to establish a "Ready Made Garments unit for Exports Knitting & Processing" at Doddaballapura, Hassan & Kolar Districts, with an investment of Rs. 682.67 crores, generating employment to about 50000 persons.

In the 22nd State High Level Clearance Committee (SHLCC) Meeting held on 24-05-2010 the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-05-2010, in all aspects.

Hence the following Order.

**Government Order No. CI 200 SPI 2010, Bangalore, dated : 02-06-2010**

Government is pleased to accord in principle approval to the Project Proposal of M/s. Scotts Garments Ltd., & Bombay Rayon Fashions Ltd., to establish a "Ready Made Garments unit for Exports Knitting & Processing" at Doddaballapura, Hassan & Kolar Districts, with an investment of Rs. 682.67 crores, generating employment to about 50000 persons and extend the following infrastructure facilities, incentives and concessions.

**Infrastructure Facilities** :

1. **Land :** 15 acres – KIADB allotted land at Doddaballapura.
   5 acres – KIADB allotted land at Hassan.
   3.70 acres of land at Sy. No. 60, 30/1, 32/1, 21,22 & 71 Sultan Thippansandra Village, Kasaba Hobli, Kolar District. U/s 109 of KLR Act and conversion of the same for industrial use
   51.30 acres – KIADB to allot land in Industrial Areas at KGF Apparel Park, Gowribidanur, Doddaballapur, Chikkaballapur, Chitradurga, Shimoga, Mudhol, Siddlaghatta, Srinivasapura.
2. **Water :** 5.086 MLD from KIADB.

3. **Power :** 34600 KVA to be serviced by respective ESCOMs
4. **Incentives and Concessions :** As per applicable Suvarna Vasthra Neethi of the State, Additional Incentives & Concessions to be examined as a separate case.

**GENERAL TERMS AND CONDITIONS** :

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

P.R. 1556

Desk Officer (Technical Cell)

Commerce & Industries Department

**COMMERCE & INDUSTRIES SECRETARIAT**

**Sub :-** Approval to the Project Proposal of M/s. Green R & D Centre, Hindustan Petroleum Corporation Ltd. to establish a "R & D Centre" at Tarabahalli & Devenagondhi Villages, Jaraganahalli Hobli, Hosakote Taluk, Bangalore Rural District.

**Read :-** Proceedings of the 22nd State High Level Clearance Committee (SHLCC) meeting held on 24-05-2010.

**Preamble:**

M/s. Green R & D Centre, Hindustan Petroleum Corporation Ltd., proposes to establish a "R & D Centre" at Tarabahalli & Devenagondhi Villages, Jaraganahalli Hobli, Hoskote Taluk, Bangalore Rural District, with an investment of Rs. 550 crores, generating employment to about 205 persons.

In the 22nd State High Level Clearance Committee (SHLCC) Meeting held on 24-05-2010 the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-05-2010, in all aspects.

Hence the following Order.

**Government Order No. CI 201 SPI 2010, Bangalore, dated : 02-06-2010**

Government is pleased to accord in principle approval to the Project Proposal of M/s. Green R & D Centre, Hindustan Petroleum Corporation Ltd., to establish a "R & D Centre" at Tarabahalli & Devenagondhi Villages, Jaraganahalli Hobli, Hoskote Taluk, Bangalore Rural District, with an investment of Rs. 550 crores, generating employment to about 205 persons. and extend the following infrastructure facilities, incentives and concessions.

**Infrastructure Facilities** :

1. **Land :** 131 Acre and 13 Guntas and additional 50 acres of land.
    - 112A 02 G of KIADB allotted at Tarabahalli Village, Jaraganahalli Hobli, Hoskote Taluk.
    - 12 A 31 G of KIADB allotted land.
    - 6 acres 20 guntas of Govt. land (KIADB acquisition is in process).
    - 50 acres of adjacent land KIADB to acquire and allot.
2. **Water :** 3800 KLD from KIADB or Secondary Treated Water from BWSSB.
3. **Power :** 5000 KVA to be serviced by BESCOM.
4. **Incentives and Concessions :** Additional Incentives & Concessions to be examined as a special case.

**GENERAL TERMS AND CONDITIONS** :

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
    a) The project proponents shall provide employment to at least one member of the family of each land looser as the land is being acquired through KIADB.
    b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
    c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

P.R. 1557

Desk Officer (Technical Cell)

Commerce & Industries Department

**COMMERCE & INDUSTRIES SECRETARIAT**

**Sub :-** Approval to the Project Proposal of M/s. Bhuvana Comforts Pvt. Ltd., to establish an "Information Technology SEZ", in B.M. Kaval & Rachanamadu Village, Kengeri Hobli, Bangalore.

**Read :-** Proceedings of the 22nd State High Level Clearance Committee (SHLCC) Meeting held on 24-05-2010.

**Preamble :**

M/s. Bhuvana Comforts Pvt. Ltd., proposes to establish an "Information Technology SEZ", in B.M. Kaval & Rachanamadu Village, Kengeri Hobli, Bangalore, with an investment of Rs. 390 crores, generating employment to about 9500 persons.

In the 22nd State High Level Clearance Committee (SHLCC) Meeting held on 24-05-2010 the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-05-2010, in all aspects.

Hence the following Order.

**Government Order No. CI 204 SPI 2010, Bangalore, dated : 02-06-2010**

Government is pleased to accord in principle approval to the Project Proposal of M/s. Bhuvana Comforts Pvt. Ltd., to establish an " Information Technology SEZ", in B.M. Kaval & Rachanamadu Village, Kengeri Hobli, Bangalore, withan investment of Rs. 390 crores, generating employment to about 9500 persons and extend the following infrastructure facilities, incentives and concessions.

**Infrastructure Facilities** :

1. **Land :** 33 acres 25 guntas of land at Sy. No.s. 191 264, 266, 190, 267, 206,207/1, 207/2, 99/2 of B.M. Kaval & 9 in Rachanamadu Village, Kengeri Hobli, Bangalore.
2. **Water :** 1000 KLPD (400 KLPD from BWSSB, 200 KLPD from own source, 300 KLPD from Recycled water and 100 KOPD from rain water harvesting)
3. **Power :** 8000 KVA power to be serviced by BESCOM.
4. **Incentives and Concessions :** As per applicable IT Policy and SEZ Policy of the State.

**GENERAL TERMS AND CONDITIONS** :

1. **MOU :** The project proponents will have to sign a MOU with the Government of Karnataka during the Global Investors Meet in June 2010
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

P.R. 1558

Desk Officer (Technical Cell)

Commerce & Industries Department.

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಎಲ್. ವೇಣುಗೋಪಾಲ್, ಪೊಲೀಸ್ ಇನ್ಸ್‌ಪೆಕ್ಟರ್, ಜಾಗೃತ ದಳ, ಬೆಸ್ಕಾಂ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬಿ(8)54/2007–08 ದಿನಾಂಕ : 18–09–2008
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿ : 23–12–09
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)54/2007–08 ದಿನಾಂಕ : 11–03–10

**ಪ್ರಸ್ತಾವನೆ :**

ಶ್ರೀ ಬಿ.ಎಲ್. ವೇಣುಗೋಪಾಲ್, ಪೊಲೀಸ್ ಇನ್ಸ್‌ಪೆಕ್ಟರ್, ಜಾಗೃತ ದಳ, ಬೆಸ್ಕಾಂ, ಬೆಂಗಳೂರು, ಇವರು ಈ ಹಿಂದೆ ಹೆಣ್ಣೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

**1.** ದಿ : 12–2–2007 ರಂದು ಬೆಳಿಗ್ಗೆ 7.00 ಗಂಟೆ ಸಮಯದಲ್ಲಿ ವಿವಾದದ ಭೂ ಮಾಲೀಕರು ಮತ್ತು ಆತನ ಸಂಬಂಧಿಕರು ಫಿರ್ಯಾದಿಯ ಮನೆಗೆ ಅತಿಕ್ರಮ ಪ್ರವೇಶ ಮಾಡಿ ಮನೆಯಲ್ಲಿ ವಾಸವಾಗಿದ್ದ ಫಿರ್ಯಾದಿ ಮತ್ತು ಇತರರಿಗೆ ಹೊಡೆದು ಹೊರಗೆ ಹಾಕಿದ್ದ ಬಗ್ಗೆ ಪೊಲೀಸ್ ಠಾಣೆಗೆ ದೂರು ಕೊಡಲು ಬಂದಾಗ ಅವರೊಂದಿಗೆ ಸೌಜನ್ಯದಿಂದ ವರ್ತಿಸದೆ ಫಿರ್ಯಾದಿ ಮತ್ತು ಮನೆಯವರನ್ನು ಠಾಣೆಯಲ್ಲಿ ದಸ್ತಗಿರಿ ಮಾಡಿ ಬಿಡುಗಡೆ ಮಾಡದೇ ಇಟ್ಟುಕೊಂಡು ಅದೇ ವೇಳೆಯಲ್ಲಿ ಅರ್ಜಿದಾರರ ಪರವಾಗಿ ಪ್ರತಿವಾದಿಗಳ ವಿರುದ್ಧ ಉಚ್ಚ ನ್ಯಾಯಾಲಯದ ಡಬ್ಲ್ಯೂ.ಪಿ. ಸಂ : 37886/04 ಆದೇಶವಿದ್ದಾಗ್ಯೂ ಸಹ ಕಾನೂನು ಬಾಹಿರವಾಗಿ ಮನೆಯನ್ನು ವಶಕ್ಕೆ ತೆಗೆದುಕೊಂಡಿದ್ದರೂ, ಸಹ ಒಬ್ಬ ಪೊಲೀಸ್ ಅಧಿಕಾರಿಯಾಗಿ ನ್ಯಾಯಾಲಯದ ಆದೇಶ ಮತ್ತು ಕಾನೂನು ಕಾಪಾಡುವ ಬದಲು ಪ್ರತಿವಾದಿಗೆ ಪರೋಕ್ಷವಾಗಿ ಸಹಾಯ ಮಾಡಿ, ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಮಾಡಬೇಕಾದ ಕರ್ತವ್ಯವನ್ನು ಮಾಡದೇ ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ ಹಾಗೂ ಕರ್ತವ್ಯಚುತಿ ಎಸಗಿರುವುದು.

**2.** ತಾವು ಬೆಂಗಳೂರು ನಗರದ ಹೆಣ್ಣೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಅರ್ಜಿದಾರರಾದ ಶ್ರೀಮತಿ ಖತೀಜ ಮತ್ತು ಮನೆಯವರಿಗೆ ಪ್ರತಿವಾದಿಗಳು ನಿಂದಿಸಿ ಹಲ್ಲೆ ಮಾಡಿದ ಬಗ್ಗೆ ದೂರು ನೀಡಲು ಠಾಣೆಗೆ ಬಂದಾಗ, ಅರ್ಜಿದಾರರಿಗೆ ಮತ್ತು ಅವರ ಮನೆಯವರನ್ನು ವೈದ್ಯಕೀಯ ಪರೀಕ್ಷೆಗೆ ಕಳುಹಿಸಿಕೊಡದೇ, ಅವರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿ ಠಾಣೆಯಲ್ಲಿ ದಸ್ತಗಿರಿ ಮಾಡಿ ಈ ಬಗ್ಗೆ ಮೇಲಾಧಿಕಾರಿಗಳ ನಿರ್ದೇಶನದಂತೆ ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತೀರಿ, ಈ ಸಂಬಂಧ ಏಕಪಕ್ಷೀಯವಾಗಿ ನಡೆದುಕೊಂಡು, ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುತ್ತೀರಿ.

**3.** ದಿ : 12-2–2007ರಂದು ಅರ್ಜಿದಾರರು ಕೊಟ್ಟ ದೂರನ್ನು ತಡವಾಗಿ ಅಂದರೆ ದಿನಾಂಕ : 14–2–2007 ರಂದು ದಾಖಲಿಸಿರುವುದಲ್ಲದೆ ಫಿರ್ಯಾದಿಯನ್ನು ನಿಂದಿಸಿ ಅರೋಪಿಯನ್ನು ದಸ್ತಗಿರಿ ಮಾಡದೇ

ತನಿಖೆಯನ್ನು ಸರಿಯಾಗಿ ನಡೆಸದೇ, ಬಿ ಅಂತಿಮ ವರದಿ ಸಲ್ಲಿಸಿಕೊಂಡು ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುತ್ತೀರಿ.

**4.** ದಿನಾಂಕ : 25–2–2007 ರಂದು ಅರ್ಜಿದಾರರಿಗೆ ಕೆಲವು ಗೂಂಡಾ ವ್ಯಕ್ತಿಗಳು ಹಲ್ಲೆ ಉಂಟುಮಾಡಿ, ಬಿಳಿ ಖಾಲಿ ಕಾಗದದ ಮೇಲೆ ಸಹಿ ಮಾಡುವಂತೆ ಒತ್ತಾಯಿಸಿದ್ದರ ಬಗ್ಗೆ ಅರ್ಜಿದಾರರು ದೂರು ಸಲ್ಲಿಸಲು ಠಾಣೆಗೆ ಬಂದಾಗ ಅವರ ದೂರು ಸ್ವೀಕರಿಸದೇ ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುವುದು.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು 3 ಆರೋಪಗಳು ಸಾಬೀತಾಗಿದ್ದು 4ನೇ ಆರೋಪವು ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 18–09–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 4 ಪೊಸಿಅ 2010, ಬೆಂಗಳೂರು, ದಿನಾಂಕ : 14ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಲ್. ವೇಣುಗೋಪಾಲ್, ಪೊಲೀಸ್ ಇನ್ಸ್‌ಪೆಕ್ಟರ್, ಜಾಗೃತ ದಳ, ಬೆಸ್ಕಾಂ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1559

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಗಂಗರಂಗಯ್ಯ, ಎಚ್.ಸಿ.–653, ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ರಾಮನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು (1) 22/2006–07 ಓ.ಬಿ. 34/08–09 ದಿನಾಂಕ : 11–12–08
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 31–03–08
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)11/2009–10 ದಿನಾಂಕ : 05–06–2009
4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 163 ಸಿಎನ್‌ಎಸ್ 09 ದಿನಾಂಕ : 05–5–2010

**ಪ್ರಸ್ತಾವನೆ :**

ಶ್ರೀ ಗಂಗರಂಗಯ್ಯ, ಎಚ್.ಸಿ.–653, ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ಇವರು ಮತ್ತು ಇನ್ನೋರ್ವ ಅಧಿಕಾರಿಯ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಹಾಗೂ ಬೇಜವಾಬ್ದಾರಿತನ

ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1) ದಿ : 12–2–2006 ರಂದು ಸಂಜೆ 4.45 ಗಂಟೆಗೆ ಇಲಿ ಪಾಷಾಣ ಸೇವಿಸಿದ್ದ ವಡ್ಡರ ದೊಡ್ಡಿ ಗ್ರಾಮದ ವಾಸಿ ರತ್ನಮ್ಮಳನ್ನು ರಾಮನಗರ ಸರ್ಕಾರಿ ಆಸ್ಪತ್ರೆಗೆ ಚಿಕಿತ್ಸೆಗಾಗಿ ದಾಖಲು ಮಾಡಿದ್ದು, ಸರ್ಕಾರಿ ಆಸ್ಪತ್ರೆಯ ವೈದ್ಯರು ಕಳುಹಿಸಿದ ಎಂ.ಎಲ್.ಸಿ., ಮೆಮೋವನ್ನು ನೀವು ಪಡೆದು ಅದೇ ದಿನ ಸೀಮಿಸ್ ನಂ. 34/2006ನ್ನು ಬರೆದು ಮಧ್ಯಾಹ್ನ 3.30 ಗಂಟೆ ಎಂದೂ ಸಮಯವನ್ನು ಠಾಣಾ ದಿನಚರಿಯಲ್ಲಿ ನಮೂದಿಸಿ ಕರ್ತವ್ಯ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.
2) ರಾಮನಗರ ಗ್ರಾಮಾಂತರ ಠಾಣಾ ಸೀಮಿಸ್ ನಂ. 34/2006ರಲ್ಲಿ ದಿ : 12–02–2006 ರಂದು ನೀವು ಆಸ್ಪತ್ರೆಗೆ ಭೇಟಿ ನೀಡಿ ವಡ್ಡರ ದೊಡ್ಡಿ ಗ್ರಾಮದ ವಾಸಿ ರತ್ನಮ್ಮಳನ್ನು ವಿಚಾರಣೆ ಮಾಡಿ ಹೇಳಿಕೆ ಪಡೆದಿದ್ದು, ಹೇಳಿಕೆ ಪಡೆಯುವಾಗ ಆಕೆ ಹೇಳಿಕೆ ನೀಡುವ ಸ್ಥಿತಿಯಲ್ಲಿದ್ದಳೆ ? ಅಥವಾ ಇಲ್ಲವೆ ? ಎಂಬ ಬಗ್ಗೆ ಸಂಬಂಧಪಟ್ಟ ವೈದ್ಯರಿಂದ ಲಿಖಿತ ವರದಿ ಪಡೆಯದೇ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.
3) ರಾಮನಗರ ಗ್ರಾಮಾಂತರ ಠಾಣಾ ಸೀಮಿಸ್ ನಂ. 34/2006ರಲ್ಲಿ ರತ್ನಮ್ಮ ಹೊಟ್ಟೆ ನೋವಿಗಾಗಿ ಪುಡಿ ಔಷಧಿಯ ಬದಲಿಗೆ ಇಲಿ ಪಾಷಾಣವನ್ನು ಸೇವಿಸಿರುವುದಾಗಿ ರತ್ನಮ್ಮಳ ಹೇಳಿಕೆಯಲ್ಲಿ ನೀವು ಬರೆದುಕೊಂಡಿದ್ದು, ಪುಡಿ ಔಷಧಿಯನ್ನು ಯಾರು ಎಲ್ಲಿಂದ ತಂದಿಟ್ಟಿದ್ದರು ಹಾಗೂ ಯಾವ ಸ್ಥಳದಲ್ಲಿಡಲಾಗಿತ್ತು ಎಂಬ ವಿವರಗಳನ್ನು ಹೇಳಿಕೆಯಲ್ಲಿ ಬರೆದುಕೊಂಡಿರುವುದಿಲ್ಲ. ಹಾಗೂ ಹೊಟ್ಟೆ ನೋವಿಗಾಗಿ ಪುಡಿ ಔಷಧಿ ಇರಲು ಸಾಧ್ಯವೇ ? ಅಥವಾ ಇಲ್ಲವೆ ಎಂಬುದನ್ನೂ ಸಹ ಖಚಿತಪಡಿಸಿಕೊಳ್ಳದೆ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.
4) ರಾಮನಗರ ಗ್ರಾಮಾಂತರ ಠಾಣಾ ಸೀಮಿಸ್ ನಂ. 34/2006ರಲ್ಲಿ ದಿ : 12–02–2006ರಂದು ವಡ್ಡರ ದೊಡ್ಡಿ ಗ್ರಾಮದ ವಾಸಿ ರತ್ನಮ್ಮಳ ಹೇಳಿಕೆ ಪಡೆಯಲು ಠಾಣೆಯಿಂದ ಎಷ್ಟು ಗಂಟೆಗೆ ಹೊರಟಿದ್ದು ಮತ್ತು ಎಷ್ಟು ಗಂಟೆಗೆ ಠಾಣೆಗೆ ಹಿಂತಿರುಗಿ ಬಂದಿದ್ದು ಹಾಗೂ ರತ್ನಮ್ಮಳ ಹೇಳಿಕೆಯನ್ನು ಯಾವ ಸಮಯದಿಂದ ಎಷ್ಟು ಸಮಯದವರೆಗೆ ಬರೆಯಲಾಯಿತು ಎಂಬ ವಿವರಗಳನ್ನು ಠಾಣಾ ದಿನಚರಿಯಲ್ಲಿ ನಮೂದಿಸದೇ ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ 4 ಮಾತ್ರ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 11–12–08ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಮೇಲಿನ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯ ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 82 ಪೊಸಿಅ 2009 ಬೆಂಗಳೂರು, ದಿನಾಂಕ : 14ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗಂಗರಂಗಯ್ಯ ಎಚ್.ಸಿ.– 653, ರಾಮನಗರ ಗ್ರಾಮಾಂತರ ಪೊಲೀಸ್ ಠಾಣೆ, ರಾಮನಗರ ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 11–12–08ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ (ಸಂಚಿತ ಪರಿಣಾಮ ರಹಿತವಾಗಿ) ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1560

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ವೈ. ತಿಮ್ಮಾಪುರ, ಮಾಜಿ ಪಿ.ಸಿ., ಬಾಗಲಕೋಟೆ ಗ್ರಾಮೀಣ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ 3/ಪಿಆರ್/ಇತರೆ 81/2008, ಅ.ಪು. ಸಂಖ್ಯೆ : 427/08, ದಿನಾಂಕ 20.11.2007 ಮತ್ತು 27.11.08.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ : ಅಪೀಲು 06/ಉವ/2009, ದಿನಾಂಕ 27–5–09.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 10–7–09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 27/2009–10, ದಿನಾಂಕ 09–12–2009.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ : 07 ಸಿಎನ್‌ಎಸ್ 10, ದಿನಾಂಕ 06–05–2010.

**ಪ್ರಸ್ತಾವನೆ :**

ಶ್ರೀ ಎ.ವೈ. ತಿಮ್ಮಾಪುರ, ಇವರು ಬಾಗಲಕೋಟೆ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

ಆಪಾದಿತರಾದ ಶ್ರೀ ಎ.ವೈ. ತಿಮ್ಮಾಪುರ, ಸಿ.ಪಿ.ಸಿ.–1244, ತೇರದಾಳ ಪೊಲೀಸ್ ಠಾಣೆ, ನೀವು ಈ ಮೊದಲು ಬಾಗಲಕೋಟೆ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ 31–01–2007 ರಂದು ನವನಗರ ಪೊಲೀಸ್ ತರಬೇತಿ ಶಾಲೆ ಮುಂದೆ ಇರುವ ಸಂಗಮೇಶ್ವರ ಖಾನಾವಳಿ ಮುಂಭಾಗದಲ್ಲಿ ರಾತ್ರಿ 19.35 ಗಂಟೆ ಸುಮಾರಿಗೆ ಬಾಗಲಕೋಟೆ ಶಹರ ಠಾಣೆಯ ಸಿಪಿಸಿ 746 ಎಫ್.ಬಿ. ತೆಗ್ಗಿ ಹಾಗೂ ಸಿಎಚ್‌ಸಿ–1026 ಎಫ್.ವಾಯ್. ತಳವಾರ ನೇದವರು ಮಾತನಾಡುತ್ತಾ ಕುಳಿತಿರುವಾಗ ಅವರ ಹತ್ತಿರ ಹೋಗಿ ಸಿಪಿಸಿ 746 ನೇದವರೊಂದಿಗೆ "ಈ ಮೊದಲು ಪೆಟ್ರೋಲ್ ಕಳ್ಳತನದ ಪ್ರಕರಣದಲ್ಲಿ ನನ್ನ ಅಮಾನತ್ತಿಗೆ ನೀನೇ ಮೇಲಾಧಿಕಾರಿಗಳಿಗೆ ಹಾಗೂ ಸಿಬ್ಬಂದಿಗಳಿಗೆ ಹೇಳಿ ನನ್ನ ಮರ್ಯಾದೆ ಕಳೆದಿರುತ್ತಿ ನನ್ನ ಅಮಾನತ್ತಿಗೆ ನೀನೇ ಕಾರಣ ಇರುವಿ ಸೂಳೇಮಗನೇ ನಿನ್ನ ಸೊಕ್ಕ ಬಹಳ ಆಗಿದೆ ಅಂತಾ ಹಲ್ಕಟ್ ಬೈದಾಡಿ, ನಿಮ್ಮ ಬಲಕಾಲಿನ ಬೂಟ್ ಬಿಚ್ಚಿ ಸಿಪಿಸಿ 746 ಎಫ್.ಬಿ. ತೆಗ್ಗಿ ಇವರ ಎಡ ಕಣ್ಣಿನ ಹತ್ತಿರ ಕಪಾಳಕ್ಕೆ ಹಾಗೂ ತಲೆಗೆ ಬೂಟಿನಿಂದ ಹೊಡೆದು, ಒಳ ನೊವು ಪಡಿಸಿ, ಕಾಲಿನಿಂದ ಒದ್ದು, ಕೆಳಗೆ ಕೆಡವಿ, ಕೈಯಿಂದ ಎದೆಗೆ ಗುದ್ದಿ, ನಿನ್ನ ಜೀವ ಸಹಿತ ಬಿಡುವುದಿಲ್ಲ" ಅಂತಾ ಜೀವದ ಬೆದರಿಕೆ ಹಾಕಿ ನೀವು ಒಬ್ಬ ಸರ್ಕಾರಿ ನೌಕರನಿಗೆ ಸಲ್ಲದ ಕೃತ್ಯವೆಸಗಿ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 20–11–07 ರ ಆದೇಶದಲ್ಲಿ ಅರ್ಜಿದಾರ ಇವರು ಪಡೆಯುತ್ತಿರುವ ಕಾಲಿಕ ವೇತನ ಶ್ರೇಣಿಯಲ್ಲಿನ 2 ಹಂತಗಳನ್ನು ಅಂದರೆ ರೂ.7100–00 ರಿಂದ ರೂ.6800–00 ಗೆ ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ 3 ವರ್ಷಗಳ ಕಾಲ ಕೆಳಗಿಳಿಸಲಾಗಿದೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ್ದಾರೆ.

ಇವರ ವಿರುದ್ಧ ದಾಖಲಾಗಿದ್ದ ಕ್ರಿಮಿನಲ್ ಪ್ರಕರಣ ಸಂಖ್ಯೆ : 1669/07 ರಲ್ಲಿ ಹೆಚ್ಚುವರಿ ಜೆ.ಎಂ.ಎಫ್.ಸಿ. ನ್ಯಾಯಾಲಯ ಬಾಗಲಕೋಟೆ, ಇವರು ದಿನಾಂಕ 27–08–08 ರಲ್ಲಿ ಈ ಕೆಳಕಂಡಂತೆ ತೀರ್ಪು ನೀಡಿದೆ.

Acting U/Sec/255(2) of Cr P.C. accusd is convicted of the offences punishable U/Sec 504, 323 and 355 of IPC.

Acting U/Sec/255(1) of Cr P.C. accusd is acquited of the offence punishable U/Sec 506 of IPC.

Accused is released after due admnoition under Section 3 of Probation of Offenders Act.

ಈ ತೀರ್ಪಿನ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರವು ಓದಲಾದ (1)ರ ದಿನಾಂಕ 27–11–08ರ ಆದೇಶದಲ್ಲಿ ನ್ಯಾಯಾಲಯ ತೀರ್ಪಿನ ದಿನಾಂಕ : 27–8–08 ರಿಂದಲೇ ಪೂರ್ವಾನ್ವಯವಾಗುವಂತೆ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 27–05–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದುರ್ನಡತೆಯನ್ನು ಎಸಗಿರುವುದು ಸಾಬೀತಾಗಿದೆ ಅರ್ಜಿದಾರರಿಗೆ ಒಂದೇ ಆರೋಪಕ್ಕೆ ಎರಡು ಬಾರಿ ದಂಡನೆಯನ್ನು ವಿಧಿಸಿರುವುದನ್ನು ಹಾಗೂ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ದಂಡನೆಯ ಆದೇಶವನ್ನು ಮಾರ್ಪಡಿಸಲು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಒಇ 131 ಪೊಸಿಅ 2009, ಬೆಂಗಳೂರು, ದಿನಾಂಕ : 14–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ವೈ. ತಿಮ್ಮಾಪುರ, ಮಾಜಿ ಪಿ.ಸಿ., ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ 20–11–07 ಮತ್ತು 27–11–08 ರ ಆದೇಶದಲ್ಲಿನ ದಂಡನೆಯ ಬದಲಾಗಿ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಿ ಆದೇಶಿಸಿದೆ.

(i) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಿ, ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ ಇವರ ವೇತನವನ್ನು ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ ಕೆಳಗಿಳಿಸುವ ದಂಡನೆಯನ್ನು ವಿಧಿಸಲಾಗಿದೆ. ಸದರಿ ದಂಡನೆಯ ಅವಧಿಯಾದ ಮೂರು ವರ್ಷಗಳವರೆಗೆ ಇವರು ಯಾವುದೇ ವಾರ್ಷಿಕ ವೇತನ ಬಡ್ತಿ ಅಥವಾ ಪದೋನ್ನತಿ ಪಡೆಯಲು ಅರ್ಹರಿರುವುದಿಲ್ಲ.

(ii) ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

(iii) ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಮರು ಸ್ಥಾಪನೆಯಾಗುವ ದಿನಾಂಕದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (dies-non) ಎಂದು ಪರಿಗಣಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಎನ್. ರವಿಪ್ರಕಾಶ್),**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1561

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ವೈ. ಜಾಧವ, ಮಾಜಿ ಪಿ.ಸಿ., ಕೇಶ್ವಾಪುರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ, ಇವರ ಆದೇಶ ಸಂಖ್ಯೆ : ಸಿಪಿ/ಸಿಬ್ಬಂದಿ 3/ನಿಯಮ 6/12/07ಅ.ಪು. ಸಂಖ್ಯೆ : 180/2008, ದಿನಾಂಕ 29.02.2008.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು (6) 01/2008–09 ಓ.ಬಿ. ಸಂಖ್ಯೆ: 38/08–09, ದಿನಾಂಕ 20–12–2008.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 18–02–09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 123/2008–09, ದಿನಾಂಕ 23–05–2009.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ : 221 ಸಿಎನ್‌ಎಸ್ 09, ದಿನಾಂಕ 05–05–2010.

**ಪ್ರಸ್ತಾವನೆ :**

ಶ್ರೀ ಎಸ್.ವೈ. ಜಾಧವ, ಇವರು ಕೇಶ್ವಾಪುರ ಪೊಲೀಸ್ ಠಾಣೆ, ಹುಬ್ಬಳ್ಳಿಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಸಿ.ಪಿ.ಸಿ–2471. ಎಸ್.ವೈ. ಜಾಧವ, ಕೇಶ್ವಾಪುರ ಪೊಲೀಸ್ ಠಾಣೆ, ನಿಮಗೆ ಮಾನ್ಯ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ, ರವರು ತಮ್ಮ ಆದೇಶ ಪತ್ರ ಸಂಖ್ಯೆ ಸಿಪಿ/ಸಿಬ್ಬಂದಿ–1/ಎಎನ್ಎಫ್/63/2006 ಆದೇಶ ಪುಸ್ತಕದ ಸಂಖ್ಯೆ : 84/2006 ದಿ : 12–03–2006 ನೇದ್ದರ ಮೇರೆಗೆ ನಿಮ್ಮನ್ನು ನಕ್ಸಲ ನಿಗ್ರಹ ದಳ, ಕಾರ್ಕಳ, ಉಡುಪಿ ಜಿಲ್ಲೆಯಲ್ಲಿ ನಿಯೋಜನೆಯ ಮೇಲೆ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕ ತಳಹದಿಯ ಮೇಲೆ ಮುಂದಿನ ಆದೇಶವಾಗುವವರೆಗೆ ನಿಯೋಜಿಸಿದ್ದು ಇತ್ತು. ಈ ಆದೇಶದ ಪ್ರಕಾರ ಪೊಲೀಸ್ ಇನ್ಸ್‌ಪೆಕ್ಟರ್, ಕೇಶ್ವಾಪುರ ಪೊಲೀಸ್ ಠಾಣೆ, ಇವರು ಸದರಿ ಆದೇಶ ಪತ್ರವನ್ನು ಜಾರಿಗೊಳಿಸಲು ನೀವು ದಿ : 13–03–2006 ರಂದು 21–00 ಗಂಟೆಯಿಂದ ಗೈರುಹಾಜರ ಆಗಿದ್ದರಿಂದ ಖುದ್ದಾಗಿ ಪೊಲೀಸ್ ಠಾಣೆಯಲ್ಲಿ ಜಾರಿ ಮಾಡಲು ಸಾಧ್ಯವಾಗದೇ, ಜಾರಿ ಮಾಡಲು ಎಚ್.ಸಿ.–2009 ಶ್ರೀ ಪಿ.ಜಿ. ಲಕ್ಷ್ಮೇಶ್ವರ ಮತ್ತು ಪಿ.ಸಿ.–2619 ಎಚ್.ಎಮ್. ಗುಳೇಶ್ ರವರುಗಳು ಪೊಲೀಸ್ ಇನ್ಸ್‌ಪೆಕ್ಟರ್, ಕೇಶ್ವಾಪುರ ಪೊಲೀಸ್ ಠಾಣೆ, ರವರ ಆದೇಶದ ಮೇರೆಗೆ ನಿಮ್ಮ ಮನೆಗೆ ಖುದ್ದಾಗಿ ಜಾರಿ ಮಾಡಲು ಬಂದಿದ್ದು, ನೀವು ಸಿಗದೇ ಇದ್ದುದರಿಂದ ಮತ್ತು ನಿಮ್ಮ ಮನೆಗೆ ಬೀಗ ಹಾಕಿದ್ದರಿಂದ ದಿ : 21.03.2006 ರಂದು ನಿಮ್ಮ ಮನೆಯ ಬಾಗಿಲಿಗೆ ಢಕಾಯಿಸಿ ಜಾರಿ ಮಾಡಿ ಬಂದಿದ್ದು ಇರುತ್ತದೆ.

ನೀವು ನಕ್ಸಲ ನಿಗ್ರಹ ದಳ, ಕಾರ್ಕಳ, ಉಡುಪಿ ಜಿಲ್ಲೆಗೆ ನಿಯೋಜಿಸಿದ್ದನ್ನು ತಿಳಿದುಕೊಂಡು ಅದೇ ದಿನದಿಂದ ಕರ್ತವ್ಯಕ್ಕೆ ಉದ್ದೇಶಪೂರ್ವಕವಾಗಿ ಹೇಳದೆ ಕೇಳದೆ ಅಂದರೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಸದರಿ ನಿಯೋಜನೆಯ ಆದೇಶ ಪತ್ರ ಹಾಗೂ ಬಿಡುಗಡೆಯ ಪತ್ರಗಳನ್ನು ಜಾರಿಗೊಳಿಸಲು ಸಿಗದೇ ಇದ್ದು, ಕೊನೆಗೆ ಸದರಿ ನಿಯೋಜನೆ ಆದೇಶ ಪತ್ರವನ್ನು ನಿಮ್ಮ ಮನೆಗೆ ಅಂಟಿಸಿ ಜಾರಿಗೊಳಿಸಿದರೂ ಸಹಾ ಕರ್ತವ್ಯಕ್ಕೆ ಬಂದು ಹಾಜರಾಗದೇ ಗೈರು ಹಾಜರಾಗಿರುತ್ತೀರಿ.

ಹೀಗಿರುವಾಗ ನೀವು ನಕ್ಸಲ ನಿಗ್ರಹ ದಳಕ್ಕೆ ಹೋಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಗೈರು ಹಾಜರಾಗಿದ್ದರಿಂದ ದಿನಾಂಕ 12–10–2006 ರಂದು ಪೊಲೀಸ್ ಇನ್ಸ್‌ಪೆಕ್ಟರ್, ಕೇಶ್ವಾಪುರ ಪೊಲೀಸ್ ಠಾಣೆ, ಇವರು ನಮ್ಮ ಮೇಲೆ ಕರ್ತವ್ಯ ಪಲಾಯನ ಪತ್ರ ಹೊರಡಿಸಲು ತಮ್ಮ ಕಛೇರಿ ಪತ್ರ ಕ್ರಮಾಂಕ 325/2006 ದಿನಾಂಕ 12–10–2006 ರ ಮೇರೆಗೆ ಮಾನ್ಯ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ರವರಿಗೆ ಪತ್ರವನ್ನು ಬರೆದುಕೊಂಡಿರುತ್ತಾರೆ.

ಅನಧಿಕೃತವಾಗಿ ಗೈರು ಹಾಜರಾಗಿ ಹಾಗೂ ಮೇಲಾಧಿಕಾರಿಗಳ ಆದೇಶ ಮತ್ತು ಇಲಾಖಾ ನಿಯಮಾವಳಿಗಳನ್ನು ಪಾಲಿಸದೇ ತಾತ್ಸರ ಮನೋಭಾವನೆಯನ್ನು ತಾಳಿ, ನೀವು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ನಿರ್ಲಕ್ಷತನ ತೋರಿಸಿದ್ದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ನಿಮ್ಮ ಮೇಲೆ ಇರುವ ಈ ಆಪಾದನೆಯ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ಈ ಆಪಾದನೆ ಪತ್ರ ನೀಡಲಾಗಿದೆ.

ನೀವು ಶಿಸ್ತಿನ ಇಲಾಖೆಯಲ್ಲಿದ್ದು ಮೇಲಾಧಿಕಾರಿಗಳ ಆದೇಶವನ್ನು ಹಾಗೂ ಇಲಾಖಾ ನಿಯಮಾವಳಿಗಳನ್ನು ಪಾಲಿಸದೇ ಅವುಗಳ ಬಗ್ಗೆ ತಾತ್ಸರ ಮನೋಭಾವನೆಯನ್ನು ತಾಳಿ ಘೋರ ದುರ್ನಡತೆ, ಅತೀವ ನಿರ್ಲಕ್ಷತನ ಮತ್ತು ನಿಷ್ಕಾಳಜಿತನ ತೋರಿಸಿದ್ದು ಕಂಡುಬರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿಯನ್ನು ಕೋರಿದ್ದು ಅರ್ಜಿದಾರರು ಸಮಜಾಯಿಷಿ ನೀಡಿರುವುದಿಲ್ಲ. ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 29–02–2008 ರ ಆದೇಶದಲ್ಲಿ ಅರ್ಜಿದಾರರು ಗೈರುಹಾಜರಾದ ದಿನಾಂಕ 14–03–2006 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 20–12–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ ಆದರೆ ಅರ್ಜಿದಾರರು ಸಲ್ಲಿಸಿದ ಸೇವೆಯನ್ನು ಗಣನೆಗೆ ತೆಗೆದುಕೊಂಡು ಮಾನವೀಯತೆ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಒಇ 44 ಪೊಸಿಅ 2009, ಬೆಂಗಳೂರು, ದಿನಾಂಕ : 14–06–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವೈ. ಜಾಧವ, ಪಿ.ಸಿ., ಕೇಶ್ವಾಪುರ ಪೊಲೀಸ್ ಠಾಣೆ, ಹುಬ್ಬಳ್ಳಿ,. ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ 29–02–2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ **"ಕಡ್ಡಾಯ ನಿವೃತ್ತಿ"** ಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1562

**ಒಳಾಡಳಿತ ಸಚಿವಾಲಯ**

**ವಿಷಯ :** ಶೌರ್ಯ ಪ್ರಶಸ್ತಿ ವಿಜೇತರಿಗೆ ಏಕ ಗಂಟಿನ ಮೊತ್ತದ ಅನುದಾನ (Lumpsum amount) ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂ : ಒಇ 74 ಕಸೈಸೇ 93, ದಿನಾಂಕ 18–01–1997.
2. ಸರ್ಕಾರಿ ಆದೇಶ ಸಂ : ಒಇ 16 ಕಸೈಸೇ 01, ದಿನಾಂಕ 06–07–2002.
3. ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ರವರ ಪತ್ರ ಸಂ : ಸೈನಿಪುಇ/ಶೌಪ್ರ/ನಿಯಮ/08, ದಿನಾಂಕ 03–04–2008.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿ ಕೇಂದ್ರ ರಕ್ಷಣಾಲಯವು ಗ್ಯಾಲಂಟರಿ ಮತ್ತು ನಾನ್ ಗ್ಯಾಲಂಟರಿ ಪ್ರಶಸ್ತಿ ವಿಜೇತರಿಗೆ ಎಲ್ಲಾ ರಾಜ್ಯಗಳಲ್ಲಿಯೂ ಏಕರೂಪದ ನಗದು ಅನುದಾನ ದರಗಳನ್ನು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು ಈ ಕೆಳಕಂಡಂತೆ ಮಂಜೂರಾತಿ ನೀಡಿತ್ತು.

| ಕ್ರಮ ಸಂ. | ಶೌರ್ಯ ಪ್ರಶಸ್ತಿಯ ಹೆಸರು | ನಗದು ಅನುದಾನ (ಒಂದು ಬಾರಿ) ರೂ. | ವರ್ಷಾಸನ | ಜಮೀನಿಗೆ ಬದಲು ನಗದು (ಒಂದು ಬಾರಿ) ರೂ. |
|---|---|---|---|---|
| 1) | ಪರಮವೀರ ಚಕ್ರ | 22,500 | 1,000 | 1,50,000 |
| 2) | ಮಹಾವೀರ ಚಕ್ರ | 15,000 | 400 | 1,00,000 |
| 3) | ವೀರ ಚಕ್ರ | 7,000 | 300 | 50,000 |
| 4) | ಅಶೋಕ ಚಕ್ರ | 20,000 | 800 | 1,25,000 |
| 5) | ಕೀರ್ತಿ ಚಕ್ರ | 12,000 | 350 | 75,000 |
| 6) | ಶೌರ್ಯ ಚಕ್ರ | 5,000 | 250 | 40,000 |
| 7) | ಸೇನಾ/ನೌಕರಿ ಸೇನಾ ವಾಯುಸೇನಾ ಮೆಡಲ್ | 3,000 | 250 | 20,000 |
| 8) | ಮೆನಶನ್ ಎನ್ ಡಿಸ್‌ಪ್ಯಾಚ್ | 2,000 | 150 | 10,000 |

ತದನಂತರ ಮೇಲೆ ಓದಲಾದ (2)ರ ಆದೇಶದಲ್ಲಿ ಈ ಕೆಳಗೆ ನಮೂದಿಸಿರುವ ವಿಶಿಷ್ಟ ಸೇವಾ ಪ್ರಶಸ್ತಿಗಳ ವಾರ್ಷಿಕ ಅನುದಾನವನ್ನು ಅವುಗಳ ಮುಂದೆ ಸೂಚಿಸಿರುವಂತೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1) ಪರಮವೀರ ಚಕ್ರ ರೂ. 1000 ರಿಂದ 2000

2) ಮಹಾವೀರ ಚಕ್ರ ರೂ. 400 ರಿಂದ 1500

3) ವೀರಚಕ್ರ ರೂ. 300 ರಿಂದ 1000

ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ನಿರ್ದೇಶಕರು ಮೇಲೆ ಓದಲಾದ (3)ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ದೇಶಕ್ಕಾಗಿ ಪ್ರಾಣ ತ್ಯಾಗ ಮಾಡಿದ ಯೋಧರ ಕುಟುಂಬದವರಿಗೆ ನೀಡುವ ಪರಿಹಾರ ಧನ ಸಹಾಯವನ್ನು (ಶೌರ್ಯ ಪ್ರಶಸ್ತಿ) ಪಂಜಾಬ, ಹರಿಯಾಣಾ ಹಾಗೂ ಉತ್ತರ ಪ್ರದೇಶ ರಾಜ್ಯಗಳಲ್ಲಿ ನೀಡುತ್ತಿರುವಂತೆ ಕರ್ನಾಟಕ ಸರ್ಕಾರವು ಕರ್ನಾಟಕದ ಯೋಧರಿಗೆ ನೀಡುತ್ತಿರುವ ನಗದು, ಅನುದಾನ, ಜಮೀನಿಗೆ ಬದಲು ನಗದು ಅನುದಾನ ಹಾಗೂ ವರ್ಷಾಸನಗಳ ಹೊರತಾಗಿ ಈ ಕೆಳಗೆ ನಮೂದಿಸಿರುವ ಏಕಗಂಟಿನ ಮೊತ್ತವನ್ನು ದಿನಾಂಕ 01-01-2007 ರಿಂದ ಜಾರಿಗೆ ಬರುವಂತೆ ಸರ್ಕಾರಿ ಆದೇಶ ಹೊರಡಿಸಲು ಕೋರಿದ್ದಾರೆ.

| ಕ್ರಮ ಸಂ. | ಶೌರ್ಯ ಪ್ರಶಸ್ತಿಯ ಹೆಸರು | ನಗದು ಅನುದಾನ (ಒಂದು ಬಾರಿ) ರೂ. | ಜಮೀನಿಗೆ ಬದಲು ನಗದು (ಒಂದು ಬಾರಿ) ರೂ. | ವರ್ಷಾಸನ | ಪ್ರಸ್ತಾವಿತ ಹೆಚ್ಚುವರಿಯಾಗಿ ನೀಡಲು ಉದ್ದೇಶಿಸಿರುವ ಏಕಗಂಟಿನ ಮೊತ್ತ (ಒಂದು ಬಾರಿ) |
|---|---|---|---|---|---|
| 1) | ಪರಮವೀರ ಚಕ್ರ | 22,500 | 1,50,000 | 2,000 | 25,00,000 |
| 2) | ಮಹಾವೀರ ಚಕ್ರ | 15,000 | 1,00,000 | 1,500 | 15,00,000 |
| 3) | ವೀರ ಚಕ್ರ | 7,000 | 50,000 | 1,000 | 10,00,000 |
| 4) | ಅಶೋಕ ಚಕ್ರ | 20,000 | 1,25,000 | 800 | 25,00,000 |
| 5) | ಕೀರ್ತಿ ಚಕ್ರ | 12,000 | 75,000 | 350 | 15,00,000 |
| 6) | ಶೌರ್ಯ | 5,000 | 40,000 | 250 | 10,00,000 |
| 7) | ಸೇನಾ/ನೌಕಾ ಸೇನಾ ವಾಯುಸೇನಾ ಮೆಡಲ್ | 3,000 | 20,000 | 250 | 5,00,000 |
| 8) | ಮೆನಶನ್ ಎನ್ ಡಿಸ್‌ಪ್ಯಾಚ್ | 2,000 | 10,000 | 150 | 2,50,000 |

ಕರ್ನಾಟಕ ಶೌರ್ಯ ಪ್ರಶಸ್ತಿ ವಿಜೇತರಿಗೆ ಏಕಗಂಟಿನ ಮೊತ್ತವನ್ನು ನೀಡುವ ಆದೇಶವನ್ನು 01-01-2007 ರಿಂದ ಅನ್ವಯವಾಗುವಂತೆ ಜಾರಿಗೆ ತಂದಲ್ಲಿ 2007-08ನೇ ಸಾಲಿನಲ್ಲಿ ಕರ್ನಲ್ (ದಿವಂಗತ) ವಸಂತ ವೇಣುಗೋಪಾಲ, (ಅಶೋಕ ಚಕ್ರ) ಇವರ ಒಂದೆ ಒಂದು ಪ್ರಕರಣವಿದ್ದು ಇದಕ್ಕಾಗಿ ರೂ.25,00,000/-ಗಳ ಅನುದಾನ ಲೆಕ್ಕ ಶೀರ್ಷಿಕೆ 2235-60-200-1-99 (100) (ಎಕ್ಸ್‌ಗ್ರೇಶಿಯಾ) ಯಡಿಯಲ್ಲಿ ನೀಡಬಹುದಾಗಿದೆ ಹಾಗೂ ಮುಂಬರುವ ದಿನಗಳಲ್ಲಿ ಶೌರ್ಯ ಪ್ರಶಸ್ತಿ ಪಡೆದವರಿಗೆ ಸಹ ಸದರಿ ಏಕಗಂಟಿನ ಧನ ಸಹಾಯ ನೀಡಬಹುದಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಒಇ 27 ಕಸೈಸೇ 2008, ಬೆಂಗಳೂರು, ದಿನಾಂಕ : 15-06-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗ್ಯಾಲಂಟರಿ ಮತ್ತು ನಾನ್ ಗ್ಯಾಲಂಟರಿ ಪ್ರಶಸ್ತಿ ವಿಜೇತರಿಗೆ ಎಲ್ಲಾ ರಾಜ್ಯಗಳಲ್ಲಿಯೂ ಏಕ ರೂಪದ ನಗದು ಅನುದಾನದ ದರಗಳನ್ನು ನೀಡುತ್ತಿರುವಂತೆ ಕರ್ನಾಟಕ ರಾಜ್ಯದಲ್ಲಿಯೂ ಈ ಕೆಳಗಿನ 8 ವರ್ಗಗಳ ಶೌರ್ಯ ಪ್ರಶಸ್ತಿ ವಿಜೇತರಿಗೆ ಒಂದು ಬಾರಿ ನೀಡುವ ಅನುದಾನದ ಮೊತ್ತವನ್ನು ಅವುಗಳೆದುರು ತೋರಿಸಿರುವಂತೆ ಹೆಚ್ಚಿಸಲು ಸರ್ಕಾರವು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮಂಜೂರಾತಿಯನ್ನು ನೀಡಿದೆ.

| ಕ್ರಮ ಸಂ. | ಶೌರ್ಯ ಪ್ರಶಸ್ತಿಯ ಹೆಸರು | ನಗದು ಅನುದಾನ (ಒಂದು ಬಾರಿ) | |
|---|---|---|---|
| | | ಈಗ ನೀಡುತ್ತಿರುವ ಏಕಗಂಟಿನ ಮೊತ್ತ | ಹೆಚ್ಚಿಸಿರುವ ದರ |
| 1) | ಪರಮವೀರ ಚಕ್ರ | 1,74,500.00 | 5,00,000.00 |
| 2) | ಮಹಾವೀರ ಚಕ್ರ | 1,16,500.00 | 2,00,000.00 |
| 3) | ವೀರ ಚಕ್ರ | 58,000.00 | 1,50,000.00 |
| 4) | ಅಶೋಕ ಚಕ್ರ | 1,45,800.00 | 5,00,000.00 |
| 5) | ಕೀರ್ತಿ ಚಕ್ರ | 87,350.00 | 2,00,000.00 |
| 6) | ಶೌರ್ಯ | 45,250.00 | 1,50,000.00 |
| 7) | ಸೇನಾ/ನೌಕಾ ಸೇನಾ ವಾಯುಸೇನಾ ಮೆಡಲ್ | 23,250.00 | 1,00,000.00 |
| 8) | ಮೆನಶನ್ ಎನ್ ಡಿಸ್‌ಪ್ಯಾಚ್ | 12,150.00 | 1,00,000.00 |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235–60–200–1–99 (100) (ಎಕ್ಸ್‌ಗ್ರೇಶಿಯಾ) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ : ಆಇ 99 ವೆ–11/2010, ದಿನಾಂಕ : 06–05–2010 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಜಿ.ಆರ್. ಶ್ರೀನಿವಾಸರಾವ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ
(ಪೊಲೀಸ್ ಸಹಾಯಕ ಸೇವೆಗಳು).

ಪಿ.ಆರ್. 1563

## ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಇಂಡಿಯನ್ ಮೆರಿಟೈಮ್ ಯೂನಿವರ್ಸಿಟಿ, ಕೊಲ್ಕತಾ ಇವರು ದಿನಾಂಕ 16–08–2010 ರಿಂದ 21–08–2010 ರವರೆಗೆ ಏರ್ಪಡಿಸಿರುವ ತರಬೇತಿಗೆ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರನ್ನು ನಿಯೋಜಿಸುವ ಬಗ್ಗೆ – ಆದೇಶ.

**ಓದಲಾಗಿದೆ** :

1. ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇವರ ಪತ್ರ ಸಂಖ್ಯೆ ಬಂಒಜಸಾ – 48/ಎಂಎಸ್‌ಸಿ/2009, ದಿನಾಂಕ 15–05–2010.

**ಪ್ರಸ್ತಾವನೆ :**

ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 15–05–2010 ರ ಪತ್ರದಲ್ಲಿ ಇಂಡಿಯನ್ ಮೆರಿಟೈಮ್ ಯೂನಿವರ್ಸಿಟಿ, ಕೊಲ್ಕತಾ ಇವರ ದಿನಾಂಕ 29–04–2010 ರ ಪತ್ರವನ್ನು ಉಲ್ಲೇಖಿಸಿ ಸದರಿ ಸಂಸ್ಥೆ ದಿನಾಂಕ 16–08–2010 ರಿಂದ 21–08–2010 ರವರೆಗೆ ಏರ್ಪಡಿಸಿರುವ ತರಬೇತಿಗೆ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರನ್ನು ನಿಯೋಜಿಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಲೋಇ 24 ಬಒಸೇ 2010, ಬೆಂಗಳೂರು, ದಿನಾಂಕ : 11–06–2010**

ಇಂಡಿಯನ್ ಮೆರಿಟೈಮ್ ಯೂನಿವರ್ಸಿಟಿ, ಕೊಲ್ಕತಾ ಇವರು ದಿನಾಂಕ 16–08–2010 ರಿಂದ 21–08–2010 ರವರೆಗೆ ಏರ್ಪಡಿಸಿರುವ ತರಬೇತಿ ಕಾರ್ಯಕ್ರಮಕ್ಕೆ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಇವರನ್ನು ನಿಯೋಜಿಸಲು ಅನುಮೋದನೆ ನೀಡಲಾಗಿದೆ. ಹಾಗೂ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರು ಸದರಿ

ತರಬೇತಿಗೆ ಹಾಜರಾದಲ್ಲಿ, ತರಬೇತಿಗೆಂದು ನಿಗದಿಪಡಿಸಿರುವ ಶುಲ್ಕ ರೂ.15,000–00 ಮತ್ತು ಸದರಿಯವರ ಹುದ್ದೆಗೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ/ದಿನ ಭತ್ಯೆ ಪಡೆಯಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಸಿದ್ದಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಮತ್ತು
ಪಿ.ಆರ್. 1564 ಒಳನಾಡು ಜಲಸಾರಿಗೆ ಇಲಾಖೆ
(ಸೇವೆಗಳು–ಸಿ)

## COMMERCE & INDUSTRIES SECRETARIAT

**Sub :-** Approval to Change of company name from M/s. IFCI Ltd., to M/s. IFCI Infrastructure Development Ltd.,

**Read :-** 1. Govt. Order No. CI 144 SPI 2010, Dated 29.04.2010.
2. Proceedings of the 22nd State High Level Clearance Committee (SHLCC) meeting held on 24-05-2010.

**Preamble:**

The Proposal of M/s. IFCI Ltd., to establish a "Financial City" at Devanahalli Industrial Area, Bangalore Rural District, with an investment of Rs.997 crores, generating employment to about 4300 persons, was approved in the 21st State High Level Clearance Committee (SHLCC) meeting held on 29-03-2010, and G.O. read at (1) above has been issued.

In the 22nd State High Level Clearance Committee (SHLCC) meeting held on 24-05-2010 the committee approved the request of the Company for Change of name from M/s. IFCI Ltd., to M/s. IFCI Infrastructure Development Ltd.

Hence the following Order.

**Government Order No. CI 144 SPI 2010, Bangalore, dated : 10-06-2010**

Government is pleased to accord approval to the to change of company name from M/s. IFCI Ltd., to M/s. IFCI Infrastructure Development Ltd., for establishment of "Financial City" at Devanahalli Industrial Area, Bangalore Rural District, with an investment of Rs. 997 crores, generating employment to about 4300 persons as per G.O. read at (1) above has been issued.

Other terms and conditions, infrastructure facilities, incentives and concessions remain the same as in the G.O. read at (1) above.

By Order and in the name of the Governor of Karnataka
**Aparna Pavate**
P.R. 1565 Desk Officer (Technical Cell)
Commerce & Industries Department

## COMMERCE & INDUSTRIES SECRETARIAT

**Sub :-** Approval to the Project Proposal of M/s. Swastik Steel (Hospet) Pvt. Ltd., to establish a "0.50 Million MTPA Integrated Steel Plant', at Danayakanakere & Gollarahalli Villages, Hospet Taluk, Bellary District.

**Read :-** Proceedings of the 22nd State High Level Clearance Committee (SHLCC) Meeting held on 24-05-2010.

**Preamble:**

M/s. Swastik Steel (Hospet) Pvt. Ltd., Proposes to establish a " 0.50 Million MTPA Integrated Steel Plant", at Danayakanakere & Gollarahalli Villages, Hospet Taluk, Bellary District, with an investment of Rs. 1500 crores, generating employment to about 362 persons.

In the 22nd State High Level Clearance Committee (SHLCC) Meeting held on 24-05-2010 the proposal of the Company has been approved.

Government has examined the recommendations made by the State High Level Clearance Committee in the 22nd Meeting held on 24-05-2010 in all aspects.

Hence the following Order.

**Government Order No. CI 242 SPI 2010, Bangalore, dated : 02-06-2010**

Government is pleased to accord in principle approval to the Project Proposal of M/s. Swastik Steel (Hospet) Pvt. Ltd., to establish a " 0.50 Million MTPA Integrated Steel Plant", at Danayakanakere & Gollarahalli Villages, Hospet Taluk, Bellary District, with an investment of Rs. 1500 crores, generating employment to about 362 persons. and extend the following infrastructure facilities, incentives and concessions.

**Infrastructure Facilities** :

1. **Land :** 580 acres at Danayakanakere & Gollarahalli Villages, Hospet Taluk, Bellary District U/s 109 of KLR Act and conversion of the same to industrial use.
2. **Water :** 6 MGD of water from Tungabhadra River during surplus/ rainy season, subject to approval of the Water Resources Department.
3. **Power :** 10,000 KVA to be serviced by GESCOM.
4. **Incentives and Concessions :** As per applicable under Industrial Policy of the State.

**GENERAL TERMS AND CONDITIONS** :

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Wher ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Aparna Pavate**
Desk Officer (Technical Cell)
Commerce & Industries Department

P.R. 1586

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ :** ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆ ಯ ಕೂಡು ರಸ್ತೆ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ.ಮೂಅಇ 65 ರಾರಾಹೆ 2007, ದಿನಾಂಕ : 27–07–07

(2) ಸರ್ಕಾರದ ಆದೇಶ ಸಂಖ್ಯೆ. ಮೂಅಇ 65 ರಾರಾಹೆ 2007, ದಿನಾಂಕ : 15–12–2008

(3) ಸರ್ಕಾರದ ಆದೇಶ ಸಂಖ್ಯೆ. ಮೂಅಇ 34 ರಾರಾಹೆ 2009, ದಿನಾಂಕ : 06–02–2010ರ ಸರ್ಕಾರಿ ಅದೇಶ.

(4) ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ, (ದ) ಬೆಂಗಳೂರು ಇವರ ದಿನಾಂಕ : 10–05–2010 ಪತ್ರ ಸಂಖ್ಯೆ : ಸಿಬಿಎಸ್ : ಹಭಪ : 34 : ಹಭಪ : 5465 : 2009–10.

**ಪ್ರಸ್ತಾವನೆ :**

ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆ ಯ ಕೂಡು ರಸ್ತೆ ನಿರ್ಮಾಣ ಕಾಮಗಾರಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರ ಶೇ 50:50 ವೆಚ್ಚವನ್ನು ಹಂಚಿಕೆ ಆಧಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಹಾಗೂ ಸದರಿ ರಸ್ತೆಯ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನ ಹಾಗೂ ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ಕ್ರಮವಾಗಿ ರೂ. 342.00 ಮತ್ತು 349.10 ಲಕ್ಷಗಳನ್ನು ಮತ್ತು ಕಾಮಗಾರಿಗೆ ತಗಲುವ ಶೇ 50 ರಷ್ಟು ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 300.00 ಲಕ್ಷಗಳನ್ನು ಮೇಲೆ ಓದಲಾದ (1), (2) ಮತ್ತು (3)ರ ಸರ್ಕಾರಿ ಅದೇಶಗಳಲ್ಲಿ ಬಿಡುಗಡೆ ಮಾಡಲಾಗಿತ್ತು.

2. ಎಲ್.ಸಿ. ಸಂಖ್ಯೆ 40–41 ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುವುದರಿಂದ ಹಾಗೂ ರಸ್ತೆ ಕಾಮಗಾರಿಗಳ ಕಂಬಗಳ ಕ್ಯಾಪ್ ತಳಮಟ್ಟಕ್ಕೆ ಪ್ರಗತಿ ಸಾಧಿಸಿದ್ದು ಮತ್ತು ಇನ್ನಿತರ ಕಾಮಗಾರಿಗಳು ಸಹ ನಡೆಯುತ್ತಿರುವುದರಿಂದ ಹಾಗೂ ಬಿಡುಗಡೆ ಮಾಡಿರುವ ಮೊತ್ತ ರೂ. 3.00 ಕೋಟಿಗಳಲ್ಲಿ ದಿನಾಂಕ : 31–03–2010ರ ಅಂತ್ಯಕ್ಕೆ ರೂ. 1,83,29,041/– ಲಕ್ಷಗಳನ್ನು ಮಾತ್ರ ಉಪಯೋಗಿಸಿಕೊಂಡಿದ್ದು, ಉಳಿದ ಮೊತ್ತ ರೂ. 1,16,70, 959/– ಲಕ್ಷಗಳು ಲ್ಯಾಪ್ಸ್ ಆಗಿದ್ದು, ಡ್ರಾ ಮಾಡಿರುವ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ನೀಡುತ್ತಾ, ಸದರಿ ಕಾಮಗಾರಿಗೆ ತಗಲುವ ಮೊತ್ತದಲ್ಲಿ ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 5.00 ಕೋಟಿಯನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (4) ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ (ದಕ್ಷಿಣ) ಮುಖ್ಯ ಇಂಜನಿಯರವರು ಕೋರಿದ್ದಾರೆ.

3. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 34 ರಾರಾಹೆ 2009, ಬೆಂಗಳೂರು, ದಿನಾಂಕ : 10ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 2.00 ಕೋಟಿಗಳನ್ನು (ರೂಪಾಯಿ ಎರಡು ಕೋಟಿ ಮಾತ್ರ) 2010–2011 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04 (ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ತುಮಕೂರು ವಿಭಾಗ, ತುಮಕೂರು ಇವರಿಗೆ ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

3. ಈ ಆದೇಶವನ್ನು ದಿನಾಂಕ : 16–05–2008 ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008 ಸರ್ಕಾರಿ ಅದೇಶದಲ್ಲಿ ಇಲಾಖೆಯು ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳ ಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 1587

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ದಿನಾಂಕ: 24-06-2010 ರಿಂದ 26-06-2010 ರವರೆಗೆ ನಡೆಯಲಿರುವ Sustainable Development ತರಬೇತಿ ಕೋರ್ಸಿಗೆ ಕೆ.ಎ.ಎಸ್. ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪತ್ರ ಸಂಖ್ಯೆ : TRG/F(NRM)/CR-25/2010-11, ದಿನಾಂಕ : 29-05-2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 29-05-2010ರ ಪತ್ರದಲ್ಲಿ ಅಡಳಿತ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ದಿನಾಂಕ : 24-06-2010 ರಿಂದ 26-06-2010ರವರೆಗೆ ನಡೆಯಲಿರುವ Sustainable Development ತರಬೇತಿ ಕೋರ್ಸಿಗೆ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿಗಳನ್ನು ನಿಯೋಜಿಸುವಂತೆ ಮಹಾನಿರ್ದೇಶಕರು ಕೋರಿದ್ದಾರೆ. ಸದರಿ ತರಬೇತಿಯಲ್ಲಿ The course comprises of field trips & class room sessions to interact with the resource persons ವಿಷಯದ ಬಗ್ಗೆ ತರಬೇತಿ ಹಮ್ಮಿಕೊಂಡಿರುವುದರಿಂದ, ಈ ತರಬೇತಿಯು ಅಧಿಕಾರಿಗಳಿಗೆ ಆಡಳಿತ ನಿರ್ವಹಣೆಯಲ್ಲಿ ಉಪಯುಕ್ತವಾಗಿದೆಯೆಂದು ಮಹಾನಿರ್ದೇಶಕರು ತಿಳಿಸಿದ್ದಾರೆ.

ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 205 ಆಸೇಇ 2010, ಬೆಂಗಳೂರು, ದಿನಾಂಕ : 14ನೇ ಜೂನ್, 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ 10 ಕೆ.ಎ.ಎಸ್. ಆಯ್ಕೆ ಶ್ರೇಣಿ ಹಾಗೂ ಹಿರಿಯ ಶ್ರೇಣಿ ಅಧಿಕಾರಿಗಳನ್ನು ಮೈಸೂರು ಅಡಳಿತ ತರಬೇತಿ ಸಂಸ್ಥೆಯಲ್ಲಿ ದಿನಾಂಕ : 24-06-2010 ರಿಂದ 26-06-2010 ರವರೆಗೆ ನಡೆಯಲಿರುವ Sustainable Development ತರಬೇತಿ ಕೋರ್ಸಿಗೆ ನಿಯೋಜಿಸಲಾಗಿದೆ.

ಅಧಿಕಾರಿಗಳು ಸದರಿ ಕೋರ್ಸಿಗೆ ಹಾಜರಾಗುವುದು ಕಡ್ಡಾಯವಾಗಿದ್ದು, ಗೈರು ಹಾಜರಾಗುವವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು. ತರಬೇತಿ ಪಡೆದ ನಂತರ ಅನುಭವಗಳ ಕಿರು ವರದಿಯನ್ನು ಒಂದು ವಾರದೊಳಗಾಗಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ. ಹಾಗೆಯೆ ಸಂಬಂಧಿಸಿದ ನಿಯಂತ್ರಣಾಧಿಕಾರಿಗಳು ಈ ತರಬೇತಿಗೆ ನಿಯೋಜಿಸಲ್ಪಟ್ಟಿರುವ ಅಧಿಕಾರಿಗಳನ್ನು ಕರ್ತವ್ಯದಿಂದ ಬಿಡುಗಡೆ ಮಾಡುವಂತೆ ಕೋರಿದೆ.

| ಕ್ರ ಸ. | ಅಧಿಕಾರಿಯ ಹೆಸರು ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀ/ಶ್ರೀಮತಿ. | ಕ್ರ ಸ. | ಅಧಿಕಾರಿಯ ಹೆಸರು ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀ/ಶ್ರೀಮತಿ. |
|---|---|---|---|
| 1. | ಎನ್. ಜಯರಾಮ್ (ಆಯ್ಕೆ ಶ್ರೇಣಿ) ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್ ಬಾಗ್ ರಸ್ತೆ, ಬೆಂಗಳೂರು. | 2 | ಕೆ.ಎಸ್. ರಾಯ್ಕರ್ (ಆಯ್ಕೆ ಶ್ರೇಣಿ) ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ, ಮೈಸೂರು |
| 3 | ಮುಜಿಬ್ ಅಹಮದ್ ಹೆಚ್.ಎಂ. (ಆ.ಶ್ರೇ) ಮುಖ್ಯ ಕಾರ್ಯನಿರ್ವಹಣಾಧಿಕಾರಿ, Devika Rani Roerich Estate, V.V. Tower, Bangalore. | 4 | ರಾಮಾಂಜನೇಯ (ಆಯ್ಕೆ ಶ್ರೇಣಿ) ಮುಖ್ಯ ಆಡಳಿತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು. |
| 5 | ಹೇಮಾಜಿ ನಾಯಕ್ (ಹಿರಿಯ ಶ್ರೇಣಿ) ವಿಶೇಷ ಭೂಸ್ವಾಧೀನಾಧಿಕಾರಿಗಳು (LAQ & R & R), ಬೃಹತ್ ನೀರಾವರಿ ಯೋಜನೆ, M&G Project, ಬೆಳಗಾಂ. | 6 | ಜಿಯಾವುಲ್ಲಾ ಎಸ್. (ಹಿರಿಯ ಶ್ರೇಣಿ) ಜಂಟಿ ನಿರ್ದೇಶಕರು (Municipal Reforms), ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು. |
| 7 | ಎಂ. ಶಶಿಧರ್ (ಹಿರಿಯ ಶ್ರೇಣಿ) ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಮತ್ತು ಯೋಜನೆ, ಬೆಂಗಳೂರು. | 8 | ಎಸ್. ಜಿ. ವಾಲಿ (ಹಿರಿಯ ಶ್ರೇಣಿ) ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಬಾಗಲಕೋಟೆ. |
| 9 | ರುದ್ರಪ್ಪ (ಹಿರಿಯ ಶ್ರೇಣಿ) ಉಪ ಆಯುಕ್ತರು, ಬ್ಯಾಟರಾಯನಪುರ ವಲಯ, ಬಿ.ಬಿ.ಎಂ.ಪಿ, ಬೆಂಗಳೂರು. | 10 | ಎಸ್. ಪಾಲಯ್ಯ (ಹಿರಿಯ ಶ್ರೇಣಿ) ಮುಖ್ಯ ಆಡಳಿತಾಧಿಕಾರಿ, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು. |

ಈ ತರಬೇತಿಗೆ ನಿಯೋಜಿತರಾಗಿರುವ ಅಧಿಕಾರಿಗಳು ನಿಯಮಾನುಸಾರ ಭತ್ಯೆ ಪಡೆಯಲು ಅರ್ಹರಾಗುತ್ತಾರೆ. ತರಬೇತಿಯ ಅವಧಿ ಹಾಗೂ ಅವಶ್ಯಕ ಪ್ರಯಾಣದ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಿ ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ. (ಸೇವೆಗಳು–2)

ಪಿ.ಆರ್. 1588

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ–ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2010ರ ಜೂನ್ ಅಂತ್ಯದ 22ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 22 ಪಿಅರ್ಎಂ 2002 ದಿನಾಂಕ : 6–3–03,
2) ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ಲೆಕ್ಕ–1/ಹುಡ್ಕೋ ಲೋನ್/198/2009–10, ದಿ : 01–06–10.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಅದೇಶ ದಿನಾಂಕ : 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ [Housing and Urban Development Corporation] ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಯ ಕೆಬಿಟ್ಸ್ ಸಂಸ್ಥೆಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2010ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಬಾಬ್ತು ಲೆಕ್ಕಶೀರ್ಷಿಕೆ "5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ" ಇದರ ಅಡಿಯಲ್ಲಿ ರೂ. 325.00 ಲಕ್ಷ ಒದಗಿಸಲಾಗಿದೆ.

ಮೇಲೆ [2] ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 22ನೇ ಕಂತಿನ ಬಾಬ್ತು ಅಸಲು ರೂ. 62,50,000/– + ಬಡ್ಡಿ ಬಾಬ್ತು ರೂ. 16,71,184/– ಒಟ್ಟು ರೂ. 79,21,184/–ಗಳನ್ನು 2010ರ ಜೂನ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತ, ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 13 ಪಿಆರ್ಎಂ 2010, ಬೆಂಗಳೂರು, ದಿನಾಂಕ : 17–06–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಾಲದ (22ನೇ ತ್ರೈಮಾಸಿಕ ಕಂತಿನ) ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ರೂ. 79,21,184/–ಗಳ [ಎಪ್ಪತ್ತೊಂಬತ್ತು ಲಕ್ಷದ ಇಪ್ಪತ್ತೊಂದು ಸಾವಿರದ ನೂರಾ ಎಂಬತ್ತನಾಲ್ಕು ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ' ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಆರ್. ಅನ್ನಪೂರ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1589

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಆಡಳಿತಾತ್ಮಕ ವೆಚ್ಚಕ್ಕಾಗಿ ಮೊದಲನೆಯ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 35 ಆಡವಿ 2010 ದಿನಾಂಕ : 15–04–10,
2) ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ : ಕರಾದೂಸಂಅಕೇಂ/71/ಜಿಇಎನ್/2010, ದಿನಾಂಕ : 12–05–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"3451–00–090–2–08** ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ – 059 ಇತರೆ ಖರ್ಚು [ಯೋಜನೆ]**"** ರಡಿಯಲ್ಲಿ ರೂ. 350.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ರೂ. 350 ಲಕ್ಷಗಳ ಒದಗಣೆ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ : 12–05–2010ರ ಪತ್ರದಲ್ಲಿ ಸಿಬ್ಬಂದಿಗಳ ವೇತನ ವಿತರಣೆ, ಆಡಳಿತ ನಿರ್ವಹಣೆ ಇತರೆ ವೆಚ್ಚಗಳಿಗಾಗಿ ಮೊದಲನೆಯ ಕಂತಿನ ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ಅದೇಶದಲ್ಲಿ 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಮೊದಲನೆಯ ತ್ರೈಮಾಸಿಕ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 57 ಎಡಿಎಂ 2010, ಬೆಂಗಳೂರು, ದಿನಾಂಕ : 18–06–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಮೊದಲನೆಯ ತ್ರೈಮಾಸಿಕ ಕಂತಿನ ಅನುದಾನವಾಗಿ ರೂ. 37.50 ಲಕ್ಷಗಳನ್ನು [ಮುವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ] ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ – 059 ಇತರೆ ಖರ್ಚು [ಯೋಜನೆ]"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಆರ್. ಅನ್ನಪೂರ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1590

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಜಿಲ್ಲಾ ಯೋಜನಾ ನಿರ್ವಹಣಾ ಘಟಕ, ಬೆಂಗಳೂರು ನಗರ, ಕೆಹೆಚ್‌ಎಸ್‌ಡಿಆರ್‌ಪಿ, ಜೆ.ಸಿ. ರಸ್ತೆ, ಮಾವಳ್ಳಿ, ಬೆಂಗಳೂರು ಈ ಕಟ್ಟಡಕ್ಕೆ ರಿಪೇರಿ ಮತ್ತು ಬಣ್ಣ ಬಳಿಯುವ ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1) AEE/KHSDRP/Sub-division/B'lore/ಪತ್ರ ಸಂಖ್ಯೆ : HFW/KHSDRP/EEE/AEE/BNG/Est-RPR-DPMU/(U) 2010-11, ದಿನಾಂಕ : 28–05–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾ ಯೋಜನಾ ನಿರ್ವಹಣಾ ಘಟಕ, ಬೆಂಗಳೂರು ನಗರ, ಕೆಹೆಚ್‌ಎಸ್‌ಡಿಆರ್‌ಪಿ, ಜೆ.ಸಿ. ರಸ್ತೆ, ಮಾವಳ್ಳಿ, ಬೆಂಗಳೂರು ಈ ಕಟ್ಟಡಕ್ಕೆ ರಿಪೇರಿ ಮತ್ತು ಬಣ್ಣ ಬಳಿಯುವ ಕಾಮಗಾರಿಯನ್ನು ಹಮ್ಮಿಕೊಳ್ಳಬೇಕಾಗಿದ್ದು, ಇದಕ್ಕೆ ಸಂಬಂಧಪಟ್ಟ ಸಹಾಯಕ ಕಾರ್ಯಪಾಲಕ ಅಭಿಯಂತರರು ನಿಯಮಗಳಿಗನುಸಾರವಾಗಿ ದರಗಳೊಂದಿಗೆ ಅಂದಾಜು

ಪಟ್ಟಿ ತಯಾರಿಸಿ ಕಳುಹಿಸಿರುತ್ತಾರೆ. ಅದರಂತೆ ಪರಿಶೀಲಿಸಿದ್ದು, ಕಾಮಗಾರಿಗೆ ಒಟ್ಟು ರೂ. 1.15 ಲಕ್ಷಗಳ ಅಂದಾಜು ವೆಚ್ಚವಾಗಲಿದ್ದು, ಇದಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಈ ಕಾಮಗಾರಿ ಅಗತ್ಯವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇ/ಎಇ-2/ಡಿಪಿಎಂಓ/ ಬೆಂಗಳೂರು-ಅರ್ಬನ್/2010-11, ದಿನಾಂಕ : 18-06-2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಜಿಲ್ಲಾ ಯೋಜನಾ ನಿರ್ವಹಣಾ ಘಟಕ, ಬೆಂಗಳೂರು ನಗರ, ಕೆಹೆಚ್‌ಎಸ್‌ಡಿಆರ್‌ಪಿ, ಜೆ.ಸಿ. ರಸ್ತೆ, ಮಾವಳ್ಳಿ, ಬೆಂಗಳೂರು ಈ ಕಟ್ಟಡಕ್ಕೆ ರಿಪೇರಿ ಮತ್ತು ಬಣ್ಣ ಬಳಿಯುವ ಕಾಮಗಾರಿಯನ್ನು ಕೈಗೊಳ್ಳಲು ರೂ. 1.15 ಲಕ್ಷ (ರೂಪಾಯಿ ಒಂದು ಲಕ್ಷದ ಹದಿನೈದು ಸಾವಿರ ಮಾತ್ರ) ಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಶಶಿಧರ್**

ಪಿ.ಆರ್. 1603

ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ಮುತ್ತೂಟ್ ಫೈನಾನ್ಸ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿ ಅಧಿನಿಯಮದಿಂದ ವಿನಾಯತಿ ನೀಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರು ಹಾಗೂ ಲೇವಾದೇವಿ ಮಹಾನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಎನ್.ಎಂ.ಎಲ್./ವೈ.ಎಂ.ಸಿ./58/2009-10, ದಿನಾಂಕ : 06-05-2010.

**ಪ್ರಸ್ತಾವನೆ:**

ಮುತ್ತೂಟ್ ಫೈನಾನ್ಸ್ ಲಿಮಿಟೆಡ್, ಈ ಸಂಸ್ಥೆಯು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕೇರಳ ಇವರಿಂದ ದಿನಾಂಕ : 26-07-2007ರಂದು ನೋಂದಣಿಯಾಗಿದ್ದು ಆರ್‌ಬಿಐನ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳ ವಿಭಾಗ, ಪ್ರಾಂತೀಯ ಕಛೇರಿ, ತಿರುವನಂತಪುರಂ ಇವರಿಂದ ದಿನಾಂಕ : 13-11-2001ರಂದು ಎನ್‌ಬಿಎಫ್‌ಸಿ ಸಂಸ್ಥೆ ಎಂದು ಪ್ರಮಾಣ ಪತ್ರ ಪಡೆದಿದ್ದು, ಕರ್ನಾಟಕದಲ್ಲಿಯೂ ಸಹ ಹಲವಾರು ಶಾಖೆಗಳನ್ನು ಹೊಂದಿದ್ದು ಕರ್ನಾಟಕ ಲೇವಾದೇವಿ ಅಧಿನಿಯಮದಿಂದ 1961ರನ್ವಯ ಪರವಾನಗಿ ಪಡೆದು ಹಣಕಾಸಿನ ವ್ಯವಹಾರ ನಡೆಸುತ್ತಿದ್ದು ತನ್ನೆಲ್ಲಾ ಶಾಖೆಗಳಿಗೆ ಸಂಬಂಧಿಸಿದಂತೆ ರೂ. 2.6 ಲಕ್ಷಗಳ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಪಾವತಿಸಿದ್ದು, ಕರ್ನಾಟಕ ಲೇವಾದೇವಿ ಅಧಿನಿಯಮದಿಂದ ವಿನಾಯಿತಿ ನೀಡಲು ಸಹಕಾರ ಸಂಘಗಳ ನಿಬಂಧಕರನ್ನು ದಿನಾಂಕ : 25-01-2010ರ ಮನವಿಯಲ್ಲಿ ಕೋರಿರುತ್ತದೆ.

ಸಹಕಾರ ಸಂಘಗಳ ನಿಬಂಧಕರು ಸದರಿ ಮನವಿಯನ್ನು ಪರಿಶೀಲಿಸಿ ಮುತ್ತೂಟ್ ಫೈನಾನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಯು ಆರ್.ಬಿ.ಐ.ನಿಂದ ಅನುಮತಿ ಪಡೆದ ಎನ್‌ಬಿಎಫ್‌ಸಿ ಸಂಸ್ಥೆಯಾಗಿದ್ದು ಎನ್‌ಬಿಎಫ್‌ಸಿ ಸಂಸ್ಥೆಗಳ ನಿಯಂತ್ರಣವು ಆರ್.ಬಿ.ಐ. ಗೆ ಒಳಪಡುವುದರಿಂದ ಕರ್ನಾಟಕ ಲೇವಾದೇವಿ ಅಧಿನಿಯಮ 1961ರ ಪ್ರಕರಣ 2(10)(iv) (ಬಿ) ರಡಿಯಲ್ಲಿ ವಿನಾಯತಿ ನೀಡಲು ಪರಿಗಣಿಸಬಹುದಾಗಿದೆ ಎಂದು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 18 ಸಿಎಂಎಲ್ 2009, ಬೆಂಗಳೂರು, ದಿನಾಂಕ 15-06-2010.**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಲೇವಾದೇವಿ ಅಧಿನಿಯಮ 1961ರ ಪ್ರಕರಣ (2)ರ ಖಂಡ 10ರ ಉಪಖಂಡ (iv)ರ ಐಟಂ (ಬಿ) ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮುತ್ತೂಟ್ ಫೈನಾನ್ಸ್ ಪ್ರೈವೇಟ್ ಲಿಮಿಟೆಡ್, ಈ ಸಂಸ್ಥೆಯು ಸದರಿ ಐಟಂನ ಉಪಬಂಧದಿಂದ ಮುಂದಿನ ಆದೇಶದವರೆಗೆ ಮತ್ತು ಭದ್ರತಾ ಠೇವಣಿ ಎಂದು ಸದರಿ ಸಂಸ್ಥೆಯು ಸರ್ಕಾರಕ್ಕೆ ಪಾವತಿಸಿರುವ ರೂ. 2,60,000.00 (ಎರಡು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವ ಷರತ್ತಿಗೊಳಪಟ್ಟು ವಿನಾಯಿತಿ ಪಡೆದಿರುತ್ತದೆ ಎಂದು ನಿಗದಿಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್.1604

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಕೆ. ಮುರಳೀಧರ, ಹಿಂದಿನ ತಹಶೀಲ್ದಾರ್, ಉಡುಪಿ ತಾಲ್ಲೂಕು, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಉಡುಪಿ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಪಬ್ಲಿಕ್ ಪ್ರಾಸಿಕ್ಯೂಟರ್, ಕರ್ನಾಟಕ ಲೋಕಾಯುಕ್ತ ಇವರ ಅ.ಸ.ಪತ್ರ ಸಂಖ್ಯೆ : ಕಂಪ್ಲೆಂಟ್/ಲೋಕ್/ಎಂವೈಎಸ್/448/2005/ಪಿಪಿ, ದಿನಾಂಕ : 06–04–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ : 06–04–2010ರ ಪತ್ರದಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರ್, ಕರ್ನಾಟಕ ಲೋಕಾಯುಕ್ತ ಇವರು, ಶ್ರೀ ಕೆ. ಮುರಳೀಧರ್, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ದಿನಾಂಕ : 28–10–2005 ರಂದು ಪಿರ್ಯಾದುದಾರರಾದ ಶ್ರೀ ದಾಮೋಧರ ಶೆಟ್ಟಿ, ಉಡುಪಿ ತಾಲ್ಲೂಕು ಇವರು ಉಡುಪಿ ತಾಲ್ಲೂಕು ಎಲ್ಲೂರು ಗ್ರಾಮದ ಸರ್ವೆ ನಂ. 43/2 ಹಾಗೂ ಇನ್ನಿತರ ಜಮೀನಿಗೆ ಸಂಬಂಧಪಟ್ಟಂತೆ ಕಾನೂನು ಬಾಹಿರವಾಗಿ ಆದೇಶ ಮಾಡಿರುತ್ತಾರೆ ಎಂದು ಮಾನ್ಯ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರನ್ನು ಪರಿಶೀಲಿಸಿ ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ : 03–04–2010ರ ವರದಿ ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 7(2) ರನ್ವಯ ಪ್ರಾರಂಭಿಕ ತನಿಖೆಯನ್ನು ನಡೆಸಿ ಸದರಿ ಅಧಿನಿಯಮ ಕಲಂ 12(3) ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಶಿಫಾರಸ್ಸು ಮಾಡಿರುವ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಕೆ. ಮುರಳೀಧರ್, ಹಿಂದಿನ ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3)ರನ್ವಯ ಶಿಫಾರಸ್ಸು ಮಾಡಿರುವಂತೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ.: ಆರ್‌ಡಿ 255 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 14–06–2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಕೆ.ಮುರಳೀಧರ್, ಹಿಂದಿನ ತಹಶೀಲ್ದಾರ್, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಉಡುಪಿ ಜಿಲ್ಲೆ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು ನಿಯಮ 11 ಮತ್ತು 11(ಎ) ರನ್ವಯ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿಯ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ಜರುಗಿಸಿ, ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1605

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವ ಕುರಿತು–ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 14 ಎಡಿಇ 2002 ದಿನಾಂಕ: 16–03–2005.

**2,** ಶ್ರೀ ಎಂ.ಎನ್. ಗದಗ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರ ವಿಚಾರಣಾ ವರದಿ ದಿನಾಂಕ : 30–09–2006.

**ಪ್ರಸ್ತಾವನೆ:**

ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಪ್ರಸ್ತುತ ನಿವೃತ್ತ ಇವರು ರಾಯಭಾಗ ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೆಳಗಾವಿ ಜಿಲ್ಲಾಧಿಕಾರಿಗಳು ನಡೆಸಿದ ಸದರಿ ಕಛೇರಿಯ ತಪಾಸಣೆ ವರದಿಯನ್ನು ಅನುಪಾಲನೆ ಮಾಡಲು ಸೂಚಿಸಿದ್ದು, ಸದರಿ ಅನುಪಾಲನಾ ವರದಿಯನ್ನು ಪರಿಶೀಲಿಸಲಾಗಿ, ರಾಯಭಾಗ ತಾಲ್ಲೂಕು ಕಛೇರಿಯಲ್ಲಿ ಸ್ವಚ್ಛತೆ ಕಾಪಾಡದಿರುವುದು, ಅಭಿಲೇಖಾಲಯದಲ್ಲಿ ಖಾಸಗಿ ವ್ಯಕ್ತಿಗಳಿಂದ ಮೂಲ ದಾಖಲೆಗಳ ಪ್ರತಿ ಮಾಡಿಸುವ ಕೆಲಸದಲ್ಲಿ ತೊಡಗಿಸಿದ್ದದ್ದು, ಮೇಲಾಧಿಕಾರಿಗಳಿಗೆ ಶಿಷ್ಟಾಚಾರ ನೀಡುವಲ್ಲಿ ವಿಫಲರಾಗಿರುತ್ತಾರೆಂಬ ಕಾರಣದಿಂದ ಸದರಿ ಜಿಲ್ಲಾಧಿಕಾರಿಯವರು ಈ ಬಗ್ಗೆ ಆರೋಪಿತ ಅಧಿಕಾರಿಯ ಇತರೆ 25

ಲೋಪದೋಷಗಳ ಬಗ್ಗೆ ದಿನಾಂಕ : 8–1–2002 ರಂದು ಕಾರಣ ಕೇಳುವ ನೋಟೀಸು ನೀಡಿದ್ದು, ಅದಕ್ಕೆ ಆಪಾದಿತ ಅಧಿಕಾರಿಯು ಸಲ್ಲಿಸಿದ ದಿನಾಂಕ : 23–1–2002ರ ಲಿಖಿತ ಹೇಳಿಕೆಯು ಸಮರ್ಪಕವಾಗಿರುವುದಿಲ್ಲವೆಂದು, ಅಲ್ಲದೆ ಈ ಆಪಾದಿತ ಅಧಿಕಾರಿಯು ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವಲ್ಲಿ ವಿಫಲರಾಗಿರುತ್ತಾರೆ ಎಂದು ಸದರಿ ಅಧಿಕಾರಿಯ ವಿರುದ್ಧ ದೋಷಾರೋಪಣ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, ಸದರಿ ನೋಟೀಸಿಗೆ, ಅಧಿಕಾರಿಯು ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೇ ಅಲ್ಲಗಳೆದಿರುವುದರಿಂದ, ಇವರ ವಿರುದ್ಧದ ಆರೋಪಗಳು ಹಾಗೂ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಸರ್ಕಾರದ ದಿನಾಂಕ : 16–03–2005ರ ಆದೇಶದಲ್ಲಿ, ಶ್ರೀ ಎಂ.ಎನ್. ಗದಗ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶ ಹೊರಡಿಸಿರುತ್ತದೆ.

ಸರ್ಕಾರದ ಆದೇಶದಂತೆ, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ದಿನಾಂಕ : 30–09–2006ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ, ಈ ಕೆಳಗಿನಂತೆ ಅಂತಿಮವಾಗಿ ಅಭಿಪ್ರಾಯ ಪಟ್ಟಿರುತ್ತಾರೆ.

"Hence, I answer charge Nos. 1 to 9 levelled against AGO in the negative as not proved satisfactorily."

ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಪ್ರಸ್ತುತ ನಿವೃತ್ತ ಇವರ ವಿರುದ್ಧದ 9 ಆಪಾದನೆಗಳು ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಸಾಬೀತಾಗಿಲ್ಲವೆಂದು ವರದಿ ನೀಡಿರುವುದರಿಂದ, ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 14 ಎಡಿಇ 2002, ಬೆಂಗಳೂರು, ದಿನಾಂಕ: 14–06–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಆರ್.ಎ. ಪಾಟೀಲ, ಹಿಂದಿನ ತಹಶೀಲ್ದಾರ್, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಪ್ರಸ್ತುತ ನಿವೃತ್ತ ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಪ್ರಸ್ತುತ ಪ್ರಕರಣಕ್ಕೆ ಸಂಬಂಧಿಸಿದಂತೆ ಕೈಬಿಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1606

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಸುಲ್ತಾನ್ ಮಹಮ್ಮದ್, ಹಿಂದಿನ ತಹಶೀಲ್ದಾರ್, ಗುಲ್ಬರ್ಗಾ, ಇವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:** (1) ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಅರೆ ಸರ್ಕಾರಿ ಪತ್ರದ ಸಂ : D.O. No. REV : OAP 28/2006-07, ದಿನಾಂಕ : 17–03–2009.

**(2)** ಸರ್ಕಾರದ ಪತ್ರ ಸಂಖ್ಯೆ: ಕಂಇ 10 ಎಡಿಇ 2007, ದಿನಾಂಕ : 25–04–2007.

**(3)** ನಿಬಂಧಕರು, ಕರ್ನಾಟಕ ಲೋಕಾಯುಕ್ತರ ಕಛೇರಿ, ಬೆಂಗಳೂರು ಇವರ ಪತ್ರ ಸಂ : ಕಂಪ್ಲೆಂಟ್/ಇತರೇ ಜಿಎಲ್‌ಬಿ 235/2007/ಎಆರ್‌ಎಲ್‌ಓ–1, ದಿನಾಂಕ : 28–04–2007.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಗುಲ್ಬರ್ಗಾ ಜಿಲ್ಲಾಧಿಕಾರಿಯವರು ಪತ್ರದಲ್ಲಿ ಶ್ರೀ ಸುಲ್ತಾನ್ ಮಹಮ್ಮದ್, ತಹಶೀಲ್ದಾರ್, ಗುಲ್ಬರ್ಗಾ ಇವರು ಬೇನಾಮಿ ಫಲಾನುಭವಿಗಳಿಗೆ ವೃದ್ದಾಪ್ಯ ವೇತನವನ್ನು ಮಂಜೂರು ಮಾಡಿ, ಸರ್ಕಾರಕ್ಕೆ ಲಕ್ಷಾಂತರ ರೂಪಾಯಿ ನಷ್ಟವುಂಟು ಮಾಡಿರುತ್ತಾರೆಂದು ತಿಳಿಸುತ್ತಾ, ಈ ಪ್ರಕರಣದಲ್ಲಿ ಈಗಾಗಲೇ ಉಪತಹಶೀಲ್ದಾರ್ ಆಗಿದ್ದ ಶ್ರೀ ಮಾರಪ್ಪ ಇವರನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು, ಸೇವೆಯಿಂದ ಅಮಾನತ್ತು ಮಾಡಲಾಗಿದೆ. ಇಂತಹ ಪ್ರಕರಣ ಬಗ್ಗೆ ಕ್ರಾಸ್ ವೆರಿಫಿಕೇಷನ್ ಮಾಡಲು ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ, ಗುಲ್ಬರ್ಗಾ ಇವರನ್ನು ಹಾಗೂ ಶ್ರೀ ಕಾಶೀನಾಥ್ ಪವಾರ್, ಕೆ.ಎ.ಎಸ್. (ಪರಿವೀಕ್ಷಣಾ) ಇವರನ್ನು ತನಿಖೆ ಮಾಡಿ ವರದಿ ನೀಡಲು ಸೂಚಿಸಲಾಗಿತ್ತು. ಅದರಂತೆ, ಸದರಿ ಅಧಿಕಾರಿಗಳು ತನಿಖೆ ನಡೆಸಿ, ಸದರಿ ವರದಿಯನುಸಾರ, ಗುಲ್ಬರ್ಗಾ ತಹಶೀಲ್ದಾರ್ ಆಗಿರುವ ಶ್ರೀ ಸುಲ್ತಾನ್ ಮಹಮ್ಮದ್ ಇವರು ಅನರ್ಹ ಫಲಾನುಭವಿಗಳಿಗೆ ಹಾಗೂ ಬೇನಾಮಿ ವ್ಯಕ್ತಿಗಳಿಗೆ ವೃದ್ದಾಪ್ಯ ವೇತನ ಮಂಜೂರು ಮಾಡಲು ಕಾರಣರಾಗಿರುತ್ತಾರೆ. ಗುಲ್ಬರ್ಗಾ ನಗರಸಭೆ ವ್ಯಾಪ್ತಿಯಲ್ಲಿ ಒಟ್ಟು 47 ಅನರ್ಹ ಫಲಾನುಭವಿಗಳಿಗೆ ಹಾಗೂ ಜೀಲನ್‌ಬಾಗ್ ವ್ಯಾಪ್ತಿಯಲ್ಲಿ 24 ಅನರ್ಹ ಫಲಾನುಭವಿಗಳಿಗೆ ವೃದ್ದಾಪ್ಯ ವೇತನವನ್ನು ಮಂಜೂರು ಮಾಡಲು ಕ್ರಮ ತೆಗೆದುಕೊಂಡಿರುತ್ತಾರೆ. ಈ ಅರ್ಜಿಗಳನ್ನು ಪರಿಶೀಲಿಸಲಾಗಿ, ಅರ್ಜಿದಾರರ ವಿಳಾಸ ಸರಿಯಾಗಿರುವುದಿಲ್ಲ. ಭಾವಚಿತ್ರಗಳು ಸರಿಯಾದ ರೀತಿಯಲ್ಲಿ ಕಾಣುವುದಿಲ್ಲ, ಮಂಜೂರಾತಿ ಆದೇಶದಲ್ಲಿ ಒಂದೇ ತರಹ ಕೈಬರಹ ಹಾಗೂ ಹೆಬ್ಬೆಟ್ಟಿನ ಗುರುತು ಇರುತ್ತದೆ. ಫಲಾನುಭವಿಯ

ಹೆಸರು ಸರಿಯಾದ ರೀತಿಯಲ್ಲಿ ಇರುವುದಿಲ್ಲ. ಇಂತಹ ಪ್ರಕರಣಗಳು, ಕಡತಗಳು ಸಾಮಾನ್ಯವಾಗಿ ಸಿಗುತ್ತಿರುವುದಿಲ್ಲ. ಇಂತಹ ಪ್ರಕರಣಗಳಲ್ಲಿ ವಿಚಾರಣೆ ಮಾಡಿದಾಗ ರಾಜಸ್ವ ನಿರೀಕ್ಷಕರು ಮತ್ತು ಗ್ರಾಮ ಲೆಕ್ಕಾಧಿಕಾರಿಗಳು ಭಾಗಿಯಾಗದೇ ಇರುವುದು ಕಂಡು ಬರುತ್ತದೆ. ಇವೆಲ್ಲವನ್ನು ತಹಶೀಲ್ದಾರ್ ಒಬ್ಬರೇ ಮಂಜೂರು ಮಾಡಲು ಕ್ರಮ ತೆಗೆದುಕೊಂಡಿರುತ್ತಾರೆ. ತಹಶೀಲ್ದಾರ್ ರವರ ಸಹಿ ಸ್ಪೆಸಿಮನ್ ಸಹಿಯು ಹೊಮದಾಣಿಕೆಯಾಗುತ್ತಿದ್ದು, ಕೆಲವು ಬೇನಾಮಿ ಫಲಾನುಭವಿಗಳು ಈಗಾಗಲೇ ಪಿಂಚಣಿಯನ್ನು ಕೆಲವು ತಿಂಗಳುಗಳಿಂದ ಪಡೆದಿರುವುದು ತಿಳಿದು ಬಂದಿದೆಯೆಂದು ತಿಳಿಸಿರುವರು.

ಮೇಲೆ ತಿಳಿಸಿರುವ ಅಂಶಗಳಲ್ಲದೆ, ಅನರ್ಹ ವ್ಯಕ್ತಿಗಳಿಗೆ ಪಿಮಚಣಿಯನ್ನು ಮಂಜೂರು ಮಾಡುವಲ್ಲಿ, ಕ್ರಮ ಕೈಗೊಂಡ ಬಗ್ಗೆ ಉದಾಹರಣೆಯಾಗಿ ಕೆಲವು ವ್ಯಕ್ತಿಗಳನ್ನು ಉದಾಹರಿಸಿರುತ್ತಾರೆ. ಇಂತಹ ಪ್ರಕರಣಗಳ ಕಡತಗಳನ್ನು ರಾಜಸ್ವ ನಿರೀಕ್ಷಕರ ಸಹಿಯು ಪ್ರತಿ ಪ್ರಕರಣಕ್ಕೆ ವ್ಯತ್ಯಾಸ ಇರುತ್ತದೆ. ಇದರಿಂದ, ಕ್ಷೇತ್ರ ಮಟ್ಟದ ಇಲಾಖಾ ನೌಕರರು ಭಾಗಿಯಾಗದೇ ಇರುವುದು ತಿಳಿದು ಬರುತ್ತದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಇಂತಹ ಪ್ರಕರಣಗಳನ್ನು ಮಂಜೂರು ಮಾಡುವಲ್ಲಿ ತಹಶೀಲ್ದಾರ್, ಗುಲ್ಬರ್ಗಾ ಇವರು ಒಬ್ಬರೇ ಕಾರಣರಾಗಿರುವುದರಿಂದ ಸದರಿಯವರ ಮೇಲೆ ಇಲಾಖಾ ವಿಚಾರಣೆ ಜರುಗಿಸಲು ಮತ್ತು ಕ್ರಿಮಿನಲ್ ಮೊಕದ್ದಮೆ ಹೂಡಲು ಕ್ರಮ ಕೈಗೊಳ್ಳಬೇಕೆಂದು ಸಹಾಯಕ ನಿರ್ದೇಶಕರು ಕೃಷಿ ಇಲಾಖೆ ಇವರು ವರದಿಯಲ್ಲಿ ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಈ ಪ್ರಕರಣದಿಂದ ಸರ್ಕಾರಕ್ಕೆ ಆರ್ಥಿಕ ನಷ್ಟವಾಗಿದ್ದು, ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಪತ್ರದಲ್ಲಿ ಮಾನ್ಯ ಲೋಕಾಯುಕ್ತರನ್ನು ಕೋರಲಾಗಿತ್ತು.

ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಈ ಪ್ರಕರಣವನ್ನು ಸರ್ಕಾರಿ ಆದೇಶದ ರೂಪದಲ್ಲಿ ಯಾವ ಪ್ರಕರಣದಡಿ ವಹಿಸಲಾಗಿದೆ ಎಂಬುದನ್ನು ನಮೂದಿಸಬೇಕಾಗಿರುತ್ತದೆ. ಸದರಿ ತನಿಖೆಯನ್ನು ಲೋಕಾಯುಕ್ತ ಕಾಯ್ದೆಯ ಕಲಂ 7(2) (ಎ)ರಡಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ ಎಂಬ ಪದಗಳನ್ನು ನಿರ್ದಿಷ್ಟವಾಗಿ ನಮೂದಿಸಿ, ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿದ್ದರು. ಸದರಿ ವಿಷಯವನ್ನು ಪರಿಶೀಲಿಸಿ, ಇಲಾಖಾ ವಿಚಾರಣೆಯನ್ನು ಮಾಡಲು ಸರ್ಕಾರವು ತೀರ್ಮಾನಿಸಿ, ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರಿಂದ ಶ್ರೀ ಸುಲ್ತಾನ್ ಮಹಮ್ಮದ್, ಹಿಂದಿನ ತಹಶೀಲ್ದಾರ್, ಗುಲ್ಬರ್ಗಾ ಇವರ ವಿರುದ್ಧ ಕರಡು ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ 1 ರಿಂದ 4ರವರೆಗೆ ತಯಾರಿಸಿ, ಸರ್ಕಾರಕ್ಕೆ ಕಳುಹಿಸುವಂತೆ ದಿನಾಂಕ : 13–11–2008ರ ಪತ್ರದಲ್ಲಿ ಕೋರಲಾಗಿರುತ್ತದೆ.

ಸದರಿ ಪ್ರಕರಣ ನಡೆದು ಈಗಾಗಲೇ ಮೂರು ವರ್ಷ ಮೇಲ್ಪಟ್ಟಿರುವುದರಿಂದ, ಈ ಪ್ರಕರಣದಲ್ಲಿ ಈತನಕ ದೋಷಾರೋಪಣಾ ಪಟ್ಟಿ ಸಹ ನೀಡದೆ ಇದ್ದುದರಿಂದ ಹಾಗೂ ಆಪಾದಿತ ಅಧಿಕಾರಿ ನಿವೃತ್ತಿ ಅಂಚಿನಲ್ಲಿರುವುದರಿಂದ, ಶ್ರೀ ಸುಲ್ತಾನ್ ಮಹಮ್ಮದ್, ತಹಶೀಲ್ದಾರ್ ಇವರಿಗೆ ಎಚ್ಚರಿಕೆ ನೀಡಿ, ಸದರಿ ಪ್ರಕರಣವನ್ನು ಮುಕ್ತಾಯ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 10 ಎಡಿಇ 2007, ಬೆಂಗಳೂರು, ದಿನಾಂಕ: 15–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸುಲ್ತಾನ್ ಮಹಮ್ಮದ್, ಹಿಂದಿನ ತಹಶೀಲ್ದಾರ್, ಗುಲ್ಬರ್ಗಾ ಇವರ ವಿರುದ್ಧ ಹೂಡಲು ಉದ್ದೇಶಿಸಿದ್ದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ. ಹಾಗೂ ಸದರಿ ಅಧಿಕಾರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1607

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಕೆ. ನಾಗರಾಜಭಟ್, ಹಿಂದಿನ ವಿಶೇಷ ತಹಶೀಲ್ದಾರ್ ಹಾಗೂ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು–ಆದೇಶ.

**ಓದಲಾಗಿದೆ:** (1) ಮಹಾ ವ್ಯವಸ್ಥಾಪಕರು, ಭೂಸ್ವಾಧೀನ, ಕೃಮೇಯೋ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ : ಮವ್ಯ/ಭೂಸ್ವಾ/ಸಿಬ್ಬಂದಿ/ವಹಿ/101/2006–07/5951 ದಿನಾಂಕ : 1–2–2007.

(2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 08 ಎಡಿಇ 2007 ದಿನಾಂಕ : 6–5–2008.

(3) ಸರ್ಕಾರದ ಪತ್ರ ಸಂಖ್ಯೆ : ಕಂಇ 08 ಎಡಿಇ 2007 ದಿನಾಂಕ : 16–10–2008 ಮತ್ತು 2–7–2009.

(4) ಶ್ರೀ ಕೆ. ನಾಗರಾಜಭಟ್, ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ : 17–7–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರಲ್ಲಿ ಶ್ರೀ ಕೆ. ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಬಿದರಿ ಗ್ರಾಮದ ಕೆಲವೊಂದು ಜಮೀನುಗಳನ್ನು ಮುಳವಾಡ ಏತ ನೀರಾವರಿ ಕಾಮಗಾರಿಗಾಗಿ ಭೂಸ್ವಾಧೀನ ಪಡಿಸಿಕೊಂಡು ಕಲಂ 6(1)ರ ಅಧಿಸೂಚನೆಯನ್ನು ಅನುಮೋದನೆಗಾಗಿ ಸಲ್ಲಿಸಿದ್ದು, ನಂತರ ದಿನಾಂಕ : 7–5–2004 ರಂದು ಅನುಮೋದನೆಗೊಂಡಿದ್ದು, ತದನಂತರ ಸುಮಾರು ಒಂದು ವರ್ಷ ಗತಿಸಿದರೂ ಐತೀರ್ಪು ಸಲ್ಲಿಸಿದ ಕಾರಣ ದಿನಾಂಕ : 31–5–2005 ರಂದು ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿತ್ತು. ಕೆ. ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು ರವರು ದಿನಾಂಕ : 18–8–2006 ರಂದು ಸುಮಾರು ಎರಡು ವರ್ಷಗಳ ನಂತರ ಈಗಾಗಲೇ ಅನುಮೋದಿಸಲಾದ ಕಲಂ 6(1)ರಲ್ಲಿಯ ರಿ.ಸ.ನಂ. 252 : 2 : 2 ಕ್ಷೇತ್ರ 0 ಎಕರೆ 24 ಗುಂಟೆ ಭೂಸ್ವಾಧೀನಗೊಳ್ಳುವುದಿಲ್ಲ, ಭೂಮಾಲೀಕರ ಅರ್ಜಿ ದಿನಾಂಕ : 16–8–2004 ಹಾಗೂ 29–9–2004 ಗಳಂತೆ ರಿ.ಸ.ನಂ. 252 : 2ಬಿ ಭೂಸ್ವಾಧೀನ ಆಗುತ್ತದೆ ಎಂದು ಕಲಂ 6(1)ರ ಕರ್ನಾಟಕ ರಾಜ್ಯ ಪತ್ರಕ್ಕೆ ತಿದ್ದುಪಡಿ ಹೊರಡಿಸಲು ವಿನಂತಿಸಿದ್ದಾರೆ.

ಶ್ರೀ ಕೆ. ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು ರಿ.ಸ.ನಂ. 252 : 2ಬಿ ಭೂಸ್ವಧೀನಗೊಳ್ಳುತ್ತದೆ ಎಂದು ಸದರಿ ಜಮೀನಿನ ಭೂಮಾಲೀಕರು ದಿನಾಂಕ : 16–8–2004 ರಂದೇ ಅರ್ಜಿ ಸಲ್ಲಿಸಿದರೂ ಸುಮಾರು 2 ವರ್ಷಗಳ ನಂತರ ತಿದ್ದುಪಡಿಗಾಗಿ ಪ್ರಸ್ತಾವನೆ ಸಲ್ಲಿಸಿರುವರು. ರ.ಸ.ಸನಂ. 252 : 2ಬಿ ಕ್ಕೆ ಹೊಸದಾಗಿ ಕಲಂ 4(1), 6(1) ಹಾಗೂ ಪತ್ರಿಕಾ ಪ್ರಕಟಣೆ ಇತ್ಯಾದಿ ಉದ್ದೇಶಗಳಿಗೆ ಮುದ್ರಣ ವೆಚ್ಚದ ರೂಪದಲ್ಲಿ ಸರ್ಕಾರಕ್ಕೆ ಆರ್ಥಿಕ ಹಾನಿ ಉಂಟಾಗಲು ಕಾರಣರಾಗಿದ್ದು, ಮೇಲ್ಕಂಡಂತೆ ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿರುವುದು ಸ್ಪಷ್ಟವಾಗಿದ್ದು, ಈ ಬಗ್ಗೆ ಸದರಿಯವರು ಕಾರಣ ಕೇಳುವ ನೋಟೀಸಿಗೆ ನೀಡಿರುವ ವಿವರಣೆಯು ಸಹ ಸಮಂಜಸವಾಗಿಲ್ಲದ ಕಾರಣ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣೆ ಪಟ್ಟಿ, ಅನುಬಂಧ 1 ರಿಂದ 4 ಹಾಗೂ ಪೂರಕ ದಾಖಲೆಗಳನ್ನು ಲಗತ್ತಿಸುತ್ತಾ, ಪ್ರಸ್ತಾವನೆಯನ್ನು ಮಹಾ ವ್ಯವಸ್ಥಾಪಕರು, ಭೂಸ್ವಾಧೀನ, ಕೃಮೇಯೋ, ನವನಗರ, ಬಾಗಲಕೋಟೆ ರವರು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರಲ್ಲಿ ಸರ್ಕಾರವು ಶ್ರೀ ಕೆ. ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ರವರು ಜಮಖಂಡಿ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಇವರಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ಮಹಾ ವ್ಯವಸ್ಥಾಪಕರು, ಭೂಸ್ವಾಧೀನ, ಕೃಮೇಯೋ, ನವನಗರ, ಬಾಗಲಕೋಟೆ ರವರು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ. (ವ. ನಿ & ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ಸರ್ಕಾರದ ದಿನಾಂಕ : 16–10–2008 ಮತ್ತು 2–7–2009ರ ಪತ್ರಗಳಲ್ಲಿ, ಶ್ರೀ ಕೆ. ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ರವರು ಜಮಖಂಡಿ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, ಲಿಖಿತ ಹೇಳಿಕೆಯು ಬಾರದಿದ್ದ ಕಾರಣ, ಒಂದು ವಾರದೊಳಗಾಗಿ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸುತ್ತಾ, ತಪ್ಪಿದಲ್ಲಿ 1957ರ ಕ.ನಾ.ಸೇ. (ವ.ನಿ&ಮೇ) ನಿಯಮಗಳ 11ನೇ ನಿಯಮದ ಮೇರೆಗೆ ಏಕಪಕ್ಷೀಯವಾಗಿ ಮುಂದಿನ ಕ್ರಮ ಜರುಗಿಸಲಾಗುತ್ತದೆ ಎಂದು ತಿಳಿಸಿ ಪತ್ರ ಬರೆಯಲಾಗಿರುತ್ತದೆ.

ಶ್ರೀ ಕೆ.ನಾಗರಾಜಭಟ್ ಅಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ರವರು ಜಮಖಂಡಿ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ರವರು ಮೇಲೆ ಓದಲಾದ ಕ್ರಮ ಸಂಖ್ಯೆ : (4) ದಿನಾಂಕ : 17–7–2009ರಂದು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪುನರ್ವಸತಿ ಅಧಿಕಾರಿಗಳು ವರ್ಗವಾದ ಪ್ರಯುಕ್ತ ಜಮಖಂಡಿ ವಿಶೇಷ ಭೂಸ್ವಾಧೀನಾಧಿಕಾರಿ ಕಛೇರಿಯ ವ್ಯಾಪ್ತಿಯಲ್ಲಿ 28 ಹಳ್ಳಿಗಳು ಮುಳುಗಡೆಯಾಗಿದ್ದು, ಸುಮಾರು 1200 ಎಕರೆ ಜಮೀನು ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಬೇಕಾಗಿದ್ದು, ಪ್ರವಾಹದಿಂದ ಹಾನಿಗೊಳಗಾದ ಸಂತ್ರಸ್ಥರಿಗೆ ಪರಿಹಾರ, ಗಂಜಿಕೇಂದ್ರ ಹಾಗೂ ನಿರಾಶ್ರಿತರಿಗೆ ಮನೆ ಕಟ್ಟಿಸಿಕೊಡುವ ಕೆಲಸ ಒತ್ತಡ ಮತ್ತು ಇದಕ್ಕಾಗಿ ಪ್ರತಿಯೊಂದು ಗ್ರಾಮಕ್ಕೆ ಭೇಟಿ ನೀಡಿ, ಸ್ಥಳ ತನಿಖೆ ನಡೆಸಿ ಪರಿಹಾರ ಕಾರ್ಯ ಕೈಗೊಳ್ಳಬೇಕಾಗಿದ್ದು, ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದಂತೆ, 4ಬಿ1 ಅಧಿಸೂಚನೆ 6ಬಿ1 ಸೂಚನೆ ಹೊರಡಿಸುವುದು, ಜೆ.ಎಂ.ಸಿ. ಮಾಡುವುದು ನೋಟೀಸು ನೀಡಿ, ಗ್ರಾಮಗಳಿಗೆ ತೆರಳಿ ಗ್ರಾಮಸಭೆ ನಡೆಸಿ ಪರಿಹಾರ ಚೆಕ್ ವಿತರಿಸುವ ಮಹತ್ತರವಾದ ಜವಾಬ್ದಾರಿ ಇದ್ದು, ಇದರೊಂದಿಗೆ ಜಮಖಂಡಿ, ಅಥಣಿ, ಬಾಗಲಕೋಟೆ ಹಾಗೂ ಬಿಜಾಪುರ ಸಿವಿಲ್ ನ್ಯಾಯಾಲಯಗಳಲ್ಲಿ ಸರ್ಕಾರದ ಪರ ವಾದಿಸಬೇಕಾಗಿದ್ದು, ಇಷ್ಟೆಲ್ಲಾ ಜವಾಬ್ದಾರಿಯು ತಮ್ಮ ಮೇಲಿದ್ದರಿಂದ, 28(ಎ) ಅರ್ಜಿಗಳು ಸ್ವೀಕೃತವಾದ ಸಮಯದಲ್ಲಿ 1200 ಎಕರೆ ಜಮೀನು ಭೂಸ್ವಾಧೀನ ಪಡೆದುಕೊಳ್ಳುವ ಪ್ರಕ್ರಿಯೆ ಭರದಿಂದ ಸಾಗುತ್ತಿದ್ದು, ಸದರಿ ಐತೀರ್ಪು ರಚಿಸುವ ಕಾರ್ಯ ನಿಗದಿತ ಅವಧಿಯೊಳಗೆ ಪೂರ್ಣಗೊಳ್ಳದಿದ್ದಲ್ಲಿ ಅಸಿಂಧು ಆಗಿ ನಿಷ್ಫಲಗೊಳ್ಳುವುದನ್ನು ತಪ್ಪಿಸುವ ಉದ್ದೇಶದಿಂದ ಹಾಗೂ ಈ ಬಗ್ಗೆ ಮೇಲಾಧಿಕಾರಿಗಳಿಂದ ಹೆಚ್ಚಿನ ಒತ್ತಡವಿದ್ದ

ಕಾರಣ ಐತೀರ್ಪು ರಚಿಸುವ ಹಾಗೂ ಪರಿಹಾರ ಚೆಕ್ ವಿತರಿಸುವ ಕೆಲಸಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿದ್ದರಿಂದ 28(ಎ) ಅರ್ಜಿಗಳ ಕಟ್ಟಡದ ಮಾಲೀಕರಿಗೆ ಈಗಾಗಲೇ ಮೊದಲನೆ ಕಂತಿನ ಪರಿಹಾರ ಧನವನ್ನು ನೀಡಿದ್ದರಿಂದ 1200 ಎಕರೆ ಜಮೀನಿನ ಐತೀರ್ಪಿನ ಕಾರ್ಯ ಮುಗಿದ ನಂತರ 28(ಎ) ಪ್ರಕರಣ ವಿಲೇಗೊಳಿಸಲು ತೀರ್ಮಾನಿಸಲಾಯಿತು. 28(ಎ) ಅಡಿಯಲ್ಲಿ ಸಲ್ಲಿಸಿದ 18 ಅರ್ಜಿಗಳನ್ನು ಶೀಘ್ರವಾಗಿ ವಿಲೇ ಮಾಡುವ ಆತುರತೆ ಇದ್ದರೂ ಅರ್ಜಿದಾರರು ವಿಚಾರಣೆಗೆ ಆಸ್ಪದ ಹಾಗೂ ಕನಿಷ್ಠ ಕಾಲಾವಕಾಶ ನೀಡದೇ ವಿಶೇಷ ಭೂಸ್ವಾಧೀನಾಧಿಕಾರಿಗಳಿಂದ ಯಾವುದೇ ಆದೇಶ, ಹಿಂಬರಹ ಪಡೆಯದೇ 18(3)(ಬಿ) ಅಡಿಯಲ್ಲಿ ಅಥಣಿ ಸಿವಿಲ್ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ್ದು, ಈ ಬಗ್ಗೆ ಅಫಿಡವಿಟ್ ಸಹ ಸಲ್ಲಿಸಿದ್ದು, ನ್ಯಾಯಾಲಯದ ಅಂತಿಮ ಆದೇಶ ಬರುವ ಪೂರ್ವದಲ್ಲಿ ಈ ಅರ್ಜಿಗಳನ್ನು ವಿಲೇಗೊಳಿಸಿದಲ್ಲಿ, ನ್ಯಾಯಾಲಯದ ಪ್ರಿಜುಡೀಸ್ ಆಗುತ್ತದೆ ಆದ ಪ್ರಯುಕ್ತ ಮುಂದಿನ ಪ್ರಕ್ರಿಯೆ ತಡೆಹಿಡಿಯಲಾಗಿತ್ತು. ಅಥಣಿ ಸಿವಿಲ್ ನ್ಯಾಯಾಲಯವು ದಿನಾಂಕ : 11–9–2006 ರಂದು ನೀಡಿದ ತೀರ್ಪು ಪ್ರಶ್ನಿಸಿ ದಿನಾಂಕ : 25–10–2006 ರಂದು ಸರ್ಕಾರದ ವಿಶೇಷ ಅಧಿಕಾರಿಗಳು, ಕಾನೂನು ಕೋಶ, ಬಾಗಲಕೋಟೆ ಇವರು ಸಿ.ಆರ್.ಪಿ. ನಂ. 6/2007 ರಿಂದ 23/2007 ರವರೆಗೆ ಸಲ್ಲಿಸಿದ್ದು, ಸದರಿ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯವು ದಿನಾಂಕ : 12–3–2007 ರಂದು ಆದೇಶ ನೀಡಿರುತ್ತದೆ. ಜಮಖಂಡಿಯಿಂದ ತಮಗೆ ವರ್ಗವಾದ ಕಾರಣ ದಿನಾಂಕ : 13–9–2006 ರಂದು ಕರ್ತವ್ಯದಿಂದ ಬಿಡುಗಡೆ ಹೊಂದಿದ್ದು, ಕಾರಣ ಉಚ್ಚ ನ್ಯಾಯಾಲಯದ ತೀರ್ಪಿನ ವಿಚಾರ ತಮ್ಮ ಗಮನಕ್ಕೆ ಬಂದಿರುವುದಿಲ್ಲ. ಅತಿ ಹೆಚ್ಚಿನ ಕೆಲಸದ ಒತ್ತಡ ಜವಾಬ್ದಾರಿ ಇದ್ದು, ಸಮಯದ ಅಭಾವದಿಂದ 28(ಎ) ಪ್ರಕರಣ ವಿಲೇಗೊಳಿಸುವಲ್ಲಿ ವಿಳಂಬವಾಗಿದ್ದು, ಯಾವುದೇ ದುರುದ್ದೇಶದಿಂದ ಕೂಡಿದ್ದು ಇಲ್ಲ ಎಂದು ತಿಳಿಸಿ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ, ತಮ್ಮನ್ನು ಈ ಆಪಾದನೆಯಿಂದ ಮುಕ್ತಗೊಳಿಸಿ ದೋಷಮುಕ್ತರನ್ನಾಗಿ ಮಾಡಲು ಮತ್ತು ತಮಗೆ ವಿಧಿಸಿರುವ ದಂಡನೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಶ್ರೀ ಕೆ. ನಾಗರಾಜಭಟ್ ಹಿಂದಿನ ವಿಶೇಷ ತಹಶೀಲ್ದಾರ್ ಹಾಗೂ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಇವರು ತಮ್ಮ ವಿರುದ್ಧ ಮಾಡಿರುವ ಆಪಾದನೆಗಳನ್ನು ಅಲ್ಲಗಳೆದಿರುವುದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಡಿ.ವಿ. ಸೇಟ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ವಿಶೇಷ ಭೂಸ್ವಾಧೀನಾಧಿಕಾರಿ, ಕೃ.ಮೇ.ಯೋ.. ಜಮಖಂಡಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 8 ಎಡಿಇ 2007, ಬೆಂಗಳೂರು, ದಿನಾಂಕ: 08–06–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಕೆ. ನಾಗರಾಜಭಟ್ ಹಿಂದಿನ ವಿಶೇಷ ತಹಶೀಲ್ದಾರ್ ಹಾಗೂ ಪ್ರಭಾರ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೃಮೇಯೋ, ಜಮಖಂಡಿ ಪ್ರಸ್ತುತ ತಹಶೀಲ್ದಾರ್, ಜಗಳೂರು, ದಾವಣಗೆರೆ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಡಿ.ವಿ. ಸೇಟ, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಶೇಷ ಭೂಸ್ವಾಧೀನಾಧಿಕಾರಿ, ಕೃ.ಮೇ.ಯೋ. ಜಮಖಂಡಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007 ದಿನಾಂಕ : 11–4–2008 ರನ್ವಯ ರೂ. 8000/– (ಎಂಟು ಸಾವಿರ ರೂ.ಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/– (ಒಂದು ಸಾವಿರದ ಐನೂರು ರೂ.ಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಅನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1608

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಇಂಧನ ಸಚಿವಾಲಯ**

**ವಿಷಯ** : ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 54 ಎನ್‌ಸಿಇ 1999 ದಿನಾಂಕ: 01.04.2000.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 138 ಎನ್‌ಸಿಇ 2001 ದಿನಾಂಕ:13.09.2001.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 165 ಎನ್‌ಸಿಇ 2010 ದಿನಾಂಕ: 26.04.2010.
5. ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರ ಪತ್ರ ಸಂಖ್ಯೆ: ಬಿಪಿಸಿಎಲ್/ಎನರ್ಜಿ/278/2010 ದಿನಾಂಕ: 04.05.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಕೊಪ್ಪಳ ಜಿಲ್ಲೆಯ ಸಾನಾಪುರ ಗ್ರಾಮದ ಆನೆಗುಂದಿಯ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 3.5 ಮೆಗಾ ವ್ಯಾಟ್‌ನಿಂದ 7.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ನೋಟೀಸನ್ನು ಕಳುಹಿಸಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಸಮಜಾಯಿಷಿಯನ್ನು ನೀಡಿರುತ್ತಾರೆ. ಅಭಿವೃದ್ಧಿದಾರರು ನೀಡಿರುವ ಉತ್ತರದಲ್ಲಿ ಆಗಸ್ಟ್ 2002 ರಲ್ಲಿ ಹಂಪಿ ಪ್ರಾಧಿಕಾರದವರು ಯೋಜನೆ ಸ್ಥಾಪನೆಗೆ ತಡೆಯಾಜ್ಞೆಯನ್ನು ನೀಡಿದ್ದು ಈ ತಡೆಯಾಜ್ಞೆ ವಿರುದ್ಧ ಘನ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 49500/2003 ರಲ್ಲಿ ದಾವೆ ಹೂಡಿದ್ದು, ಈ ರಿಟ್ ಅರ್ಜಿಯು ಈ ಕೆಳಗಿನ ಆದೇಶದೊಂದಿಗೆ ವಜಾಗೊಂಡಿರುತ್ತದೆ:–

> " If the petitioner is willing to approach the State of Karnataka for seeking refund of the amount so spent, it is always open for the petitioner to approach the State of Karnataka."

ಈ ಬಗ್ಗೆ ಖರ್ಚಾಗಿರುವ ವೆಚ್ಚವನ್ನು ಹಿಂದಿರುಗಿಸುವಂತೆ ಮೆ॥ ಬೊರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರು ದಿನಾಂಕ: 21.11.2008 ರಂದು ಸರ್ಕಾರವನ್ನು ಕೋರಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ದಿನಾಂಕ: 23.06.2009ರ ಆದೇಶ ಸಂಖ್ಯೆ: ಇಎನ್ 444 ಎನ್ ಸಿ ಇ 2008ರಲ್ಲಿ ಮನವಿಯನ್ನು ತಿರಸ್ಕರಿಸಲಾಗಿದೆ. ಕಂಪನಿಯು ತಮ್ಮ ಮನವಿಯಲ್ಲಿ ಈ ಯೋಜನೆಯ ಬದಲಿಗೆ ಬೇರೆ ಯಾವುದಾದರೂ ಯೋಜನೆಯನ್ನು ಹಂಚಿಕೆ ಮಾಡಬೇಕೆಂದು ಅಥವಾ ಇದೇ ಯೋಜನೆಯನ್ನು ಮುಂದುವರೆಸಲು ಅನುಕೂಲವಾಗುವಂತೆ ಏರ್ಪಾಡು ಮಾಡಬೇಕೆಂದು ಕೋರಿರುತ್ತಾರೆ.

ಯೋಜನೆಯು ಹಂಚಿಕೆಗಾಗಿ 10 ವರ್ಷಗಳು ಕಳೆದಿರುತ್ತದೆ. ಈ ಯೋಜನೆಗೆ ಹಂಪಿ ಪ್ರಾಧಿಕಾರದಿಂದ ತಡೆಯಿರುವ ಹಿನ್ನೆಲೆಯಲ್ಲಿ ಹಾಗೂ ಹಂಪಿಯು ಕರ್ನಾಟಕದ ಪ್ರವಾಸಿ ತಾಣದಲ್ಲಿ ಒಂದಾಗಿರುವುದರಿಂದ ಈ ಯೋಜನೆಯನ್ನು ಮುಂದುವರೆಸುವುದು ಅಷ್ಟೊಂದು ಸೂಕ್ತವಾಗಿರುವುದಿಲ್ಲವೆಂದು ತೀರ್ಮಾನಿಸಿ ಹಂಚಿಕೆ ಆದೇಶವನ್ನು ರದ್ದುಪಡಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 165 ಎನ್‌ಸಿಇ 2010, ಬೆಂಗಳೂರು, ದಿನಾಂಕ: 19-06-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 54 ಎನ್‌ಸಿಇ 1999 ದಿನಾಂಕ: 01.04.2000 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಡಿಇ 138 ಎನ್‌ಸಿಇ 2001 ದಿನಾಂಕ: 13.09.2001ರಲ್ಲಿ ಮೆ॥ ಬೊರೂಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಕೊಪ್ಪಳ ಜಿಲ್ಲೆಯ ಸಾನಾಪುರ ಗ್ರಾಮದ ಆನೆಗೊಂದಿಯ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

PR. No 1616

**ಇಂಧನ ಸಚಿವಾಲಯ**

**ವಿಷಯ** : ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 260 ಎನ್‌ಸಿಇ 2003 ದಿನಾಂಕ:16.02.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 184 ಎನ್‌ಸಿಇ 2010 ದಿನಾಂಕ: 26.04.2010.
5. ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರ ಪತ್ರ ದಿನಾಂಕ: 03.05.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶಗಳಲ್ಲಿ ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಮರ್ಕಳ ಹೊಳೆಗೆ ಅಡ್ಡಲಾಗಿ (ಸೀತಾನದಿ ಮೇಲ್ತೊರೆ) 2.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ನೋಟೀಸನ್ನು ಕಳುಹಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರದಲ್ಲಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಡಿ.ಪಿ.ಆರ್. ತಯಾರಿಸಿದ್ದು ಅರಣ್ಯ ಇಲಾಖೆಯನ್ನು ಹೊರತುಪಡಿಸಿ ಬೇರೆ ಇಲಾಖೆಗಳಿಂದ Preliminary Permission ಪಡೆಯಲಾಗಿದೆ ಎಂದು ತಿಳಿಸಿ ಯೋಜನೆಯ ಪ್ರದೇಶದ ಭೂ- ಸ್ವಾಧೀನ ಬಗ್ಗೆ ಸರ್ವೆಮಾಡುತ್ತಿರುವ ಸಮಯದಲ್ಲಿ ನಕ್ಸಲೈಟ್‌ಗಳು ಯೋಜನೆಯನ್ನು ಮುಂದುವರೆಸಬಾರದೆಂದು ಬೆದರಿಕೆಯನ್ನು ಒಡ್ಡಿರುವುದರಿಂದ ಸರ್ವೆ ಕೆಲಸವು ಸಂಪೂರ್ಣವಾಗಿರುವುದಿಲ್ಲವೆಂದು, ನಕ್ಸಲೈಟ್‌ಗಳ ತೊಂದರೆಯು ನಿವಾರಣೆಯಾದಲ್ಲಿ ಪೊಲೀಸ್ ರಕ್ಷಣೆಯೊಂದಿಗೆ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದೆಂದು ತಿಳಿಸಿ ಮುಂದಿನ 1 ವರ್ಷಕ್ಕೆ ಕಾಲಾವಕಾಶವನ್ನು ವಿಸ್ತರಿಸಲು ಕೋರಿದ್ದಾರೆ.

ಯೋಜನೆಯ ಪ್ರದೇಶದಲ್ಲಿ ನಕ್ಸಲೈಟ್‌ಗಳಿಂದ ತೊಂದರೆಯಿರುವುದರಿಂದ ಹಾಗೂ ಯೋಜನೆಯು ಹಂಚಿಕೆಯಾಗಿ 6 ವರ್ಷಗಳು ಕಳೆದರೂ ಮೆ॥ ರಿವರ್‌ವ್ಯೂ ಕೋ-ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ಯೋಜನೆಯ ಅನುಷ್ಠಾನದ

ನಿಟ್ಟಿನಲ್ಲಿ ಯಾವುದೇ ಗಣನೀಯವಾದ ಪ್ರಗತಿಯನ್ನು ಸಾಧಿಸಿರುವುದು ಕಂಡು ಬಂದಿಲ್ಲದಿರುವುದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 184 ಎನ್‌ಸಿಇ 2010, ಬೆಂಗಳೂರು, ದಿನಾಂಕ: 19–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 260 ಎನ್‌ಸಿಇ 2003 ದಿನಾಂಕ: 16.02.2004ರಲ್ಲಿ ಮೆ॥ ರಿವರ್‌ವ್ಯೂ ಕೋ–ಆಪರೇಟೀವ್ ರೆಸಾರ್ಟ್ಸ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಮರ್ಕಳ ಹೋಳಿಗೆ (ಸೀತಾ ನದಿಯ ಮೇಲ್ತೊರೆ) ಅಡ್ಡಲಾಗಿ ಹಂಚಿಕೆಯಾಗಿದ್ದ 2.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

PR. No 1617

**ENERGY SECRETARIAT**

**CORRIGENDUM**

No.En 67 PSR 2009 Bangalore, Dated: 17-06-2010

The date of Addendum No: EN 67 PSR 2009 appeared as “Dated: 26-04-2010” shall be read as “Dated: 31.03.2010”.

P.R.NO.1618

By order and in the name of the Governor of Karnataka
**S.J. SAMPATH KUMAR**
Under Secretary to Government,
Energy Department.

**ಇಂಧನ ಸಚಿವಾಲಯ**

**ವಿಷಯ** : ಮೆ॥ ಅಮೃತ್ ಅಪೇರಲ್ಸ್ ಇವರಿಗೆ ಹಂಚಿಕೆ ಮಾಡಲಾಗಿರುವ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 417 ಎನ್‌ಸಿಇ 2004 ದಿನಾಂಕ: 5.01.2005.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 191 ಎನ್‌ಸಿಇ 2010 ದಿನಾಂಕ: 26.04.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಅಮೃತ್ ಅಪೇರಲ್ಸ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಬಾಜೆ ಅಣೆಕಟ್ಟಿನ ಸ್ವರ್ಣಾ ನದಿಯ ಬಲದಂಡೆಯಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಅಮೃತ್ ಅಪೇರಲ್ಸ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ|| ಅಮೃತ್ ಅಪೇರಲ್ಸ್ ಇವರಿಗೆ ನೋಟೀಸನ್ನು ಕಳುಹಿಸಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಆದರೆ ಸದರಿ ಕಾರಣ ಕೇಳುವ ನೋಟೀಸು No such firm in the address. Hence returned to the sender" ಎಂದು ಹಿಂದಕ್ಕೆ ಬಂದಿರುತ್ತದೆ. ಕ್ರೆಡಲ್ ಸಂಸ್ಥೆಯಲ್ಲಿಯೂ ಸಹ ಪರಿಶೀಲಿಸಲಾಯಿತು. ವಿಳಾಸ ಬದಲಾವಣೆ ಬಗ್ಗೆ ಯವುದೇ ಮಾಹಿತಿಯನ್ನು ಅಭಿವೃದ್ಧಿದಾರರು ನೀಡಿಲ್ಲವೆಂಬುದನ್ನು ಕ್ರೆಡಲ್ ಸಂಸ್ಥೆಯಿಂದ ದೃಡೀಕರಿಸಿಕೊಳ್ಳಲಾಯಿತು. ಯೋಜನೆಯು ಹಂಚಿಕೆಯಾಗಿ 5 ವರ್ಷ ಕಳೆದರೂ ಮೆ॥ಃ ಅಮೃತ್ ಅಪೇರಲ್ಸ್ ಇವರು ಯೋಜನೆಯನ್ನು ಅನುಷ್ಠಾನ ಮಾಡಿರುವುದಿಲ್ಲ. ಆದ್ದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2010, ಬೆಂಗಳೂರು, ದಿನಾಂಕ: 21–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 417 ಎನ್‌ಸಿಇ 2004 ದಿನಾಂಕ: 5.01.2005ರಲ್ಲಿ ಮೆ॥ಃ ಅಮೃತ್ ಅಪೇರಲ್ಸ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಬಾಜೆ ಅಣೆಕಟ್ಟಿನ ಸ್ವರ್ಣಾ ನದಿಯ ಬಲದಂಡೆಯಲ್ಲಿ ಹಂಚಿಕೆಯಾಗಿದ್ದ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1619

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ** : ಮೆ|| ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 321 ಎನ್‌ಸಿಇ 2002 ದಿನಾಂಕ: 27.01.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 154 ಎನ್‌ಸಿಇ 2010 ದಿನಾಂಕ: 26.04.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ಃ ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ 6. ಕಿ.ಮೀ.ನಲ್ಲಿರುವ ಧಾಡೆ ಸುಗೂರು ಗ್ರಾಮದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ|| ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ಃ ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ನೋಟೀಸನ್ನು ಕಳುಹಿಸಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಆದರೆ ಸದರಿ ಕಾರಣ ಕೇಳುವ ನೋಟೀಸು "Refused Returned to sender" ಎಂದು ಹಿಂದಕ್ಕೆ ಬಂದಿರುತ್ತದೆ.

ಯೋಜನೆಯು ಹಂಚಿಕೆಯಾಗಿ 7 ವರ್ಷ ಕಳೆದರೂ ಯೋಜನೆ ಅನುಷ್ಠಾನವನ್ನು ಮೆ।। ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರು ಮಾಡಿರುವುದಿಲ್ಲ. ಆದ್ದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 154 ಎನ್‌ಸಿಇ 2010, ಬೆಂಗಳೂರು, ದಿನಾಂಕ: 21–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 321 ಎನ್‌ಸಿಇ 2002 ದಿನಾಂಕ: 27.01.2003ರಲ್ಲಿ ಮೆ।। ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ 6 ಕಿ.ಮೀ.ನಲ್ಲಿರುವ ಧಾಡೆ ಸುಗೂರು ಗ್ರಾಮದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1620

**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ** : ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರಿಗೆ ಹಂಚಿಕೆ ಮಾಡಲಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 375 ಎನ್‌ಸಿಇ 2004 ದಿನಾಂಕ: 21.12.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.4.2010
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 187 ಎನ್‌ಸಿಇ 2010 ದಿನಾಂಕ: 26.04.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಕಿಗ್ಗ ಹೋಬಳಿಯ ಯಡದಹಳ್ಳಿ ಬಳಿ ಮಾಗಿಬೈಲು ಫಾಲ್ಸ್‌ಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರಿಗೆ ನೋಟೀಸನ್ನು ಕಳುಹಿಸಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು. ಆದರೆ ಸದರಿ ಕಾರಣ ಕೇಳುವ ನೋಟೀಸು "No such firm is present in this address not Know hence R/S" ಎಂದು ಹಿಂದಕ್ಕೆ ಬಂದಿರುತ್ತದೆ.

ಯೋಜನೆಯು ಹಂಚಿಕೆಯಾಗಿ 6 ವರ್ಷ ಕಳೆದರೂ ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರು ಯೋಜನೆ ಅನುಷ್ಠಾನ ಮಾಡಿರುವುದಿಲ್ಲ. ಆದ್ದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 187 ಎನ್‌ಸಿಇ 2010, ಬೆಂಗಳೂರು, ದಿನಾಂಕ: 21–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 375 ಎನ್‌ಸಿಇ 2004 ದಿನಾಂಕ: 21.12.2004ರಲ್ಲಿ ಮೆ।। ಮಾಗಿಬೈಲು ಎಂಟರ್‌ಪ್ರೈಸಸ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ

ಕಿಗ್ಗ ಹೋಬಳಿಯ ಯಡದಹಳ್ಳಿ ಬಳಿ ಮಾಗಿಬೈಲು ಫಾಲ್ಸ್‌ಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1621

**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ** : ಮೆ|| ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 1.0 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 88 ಎನ್‌ಸಿಇ 2003 ದಿನಾಂಕ: 12.08.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.04.2010
3. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 153 ಎನ್‌ಸಿಇ 2010 ದಿನಾಂಕ: 26.04.2010.
4. ಮೆ|| ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರ ಪತ್ರ ದಿನಾಂಕ: 30.04.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆಃಃ ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರಂ ಎಂಬಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆಃಃ ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆಃಃ ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ನೋಟೀಸನ್ನು ನೀಡಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಉತ್ತರ ನೀಡಿರುತ್ತಾರೆ. ಅಭಿವೃದ್ಧಿದಾರರು ನೀಡಿರುವ ಉತ್ತರದಲ್ಲಿ ಡಿ.ಪಿ.ಆರ್. ಪೂರ್ಣಗೊಳಿಸಿದ್ದು, ಕೆ.ಇ.ಬಿ. ಇವರಿಂದ ಜಮೀನು ಗುತ್ತಿಗೆ ನೀಡಿರುವುದಿಲ್ಲ. ಇದರಿಂದಾಗಿ ನಿಗಧಿತ ಅವಧಿಯೊಳಗೆ ಈಟಿಚಿಟಿಛಿಟ ಅಟಥಿಜ ಮಾಡಲಾಗಿರುವುದಿಲ್ಲ ಎಂದು ತಿಳಿಸಿ ಕಾಲಾವಕಾಶ ವಿಸ್ತರಣೆಗಾಗಿ ಈಗಾಗಲೇ ಅರ್ಜಿಯನ್ನು ಸಲ್ಲಿಸಲಾಗಿದೆ ಎಂದು ತಿಳಿಸಿರುತ್ತಾರೆ. ಯಾವುದೇ ಪೂರಕ ದಾಖಲಾತಿಗಳನ್ನು ನೀಡಿರುವುದಿಲ್ಲ. ಯೋಜನೆಯ ಹಂಚಿಕೆಯು 2003ರಲ್ಲಿಯೇ ಆಗಿದ್ದು 7 ವರ್ಷಗಳಾದರೂ ಯೋಜನೆಯ ಅನುಷ್ಠಾದ ನಿಟ್ಟಿನಲ್ಲಿ ಯಾವುದೇ ಗಣನೀಯವಾದ ಪ್ರಗತಿಯನ್ನು ಸಾಧಿಸಿರುವುದು ಕಂಡು ಬರುವುದಿಲ್ಲ. ಆದ್ದರಿಂದ ಈಗಾಗಲೇ ನೀಡಲಾಗಿದ್ದ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 153 ಎನ್‌ಸಿಇ 2010, ಬೆಂಗಳೂರು, ದಿನಾಂಕ: 18–06–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 88 ಎನ್‌ಸಿಇ 2003 ದಿನಾಂಕ: 12.08.2003ರಲ್ಲಿ ಮೆಃಃ ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರಂ ಎಂಬಲ್ಲಿ ಹಂಚಿಕೆಯಾಗಿದ್ದ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1622

**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ** : ಮೆ|| ತೇಜಸ್ ಎನರ್ಜಿ ಕಂಪನಿ ಇವರಿಗೆ ಹಂಚಿಕೆ ಮಾಡಲಾಗಿರುವ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 294 ಎನ್‌ಸಿಇ 2002 ದಿನಾಂಕ: 08.03.2004.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 121 ಎನ್‌ಸಿಇ 2007 ದಿನಾಂಕ: 30.03.2007.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.04.2010
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 139 ಎನ್‌ಸಿಇ 2010 ದಿನಾಂಕ: 26.04.2010.
5. ಮೆ|| ತೇಜಸ್ ಎನರ್ಜಿ ಕಂಪನಿ ಇವರ ಪತ್ರಗಳ ದಿನಾಂಕ: 15.05.2010.ಮತ್ತು 10.05.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥॥ ತೇಜಸ್ ಎನರ್ಜಿ ಕಂಪನಿ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಕೊಯನಾಡು ಗ್ರಾಮದ ಸಂಪಾಜೆ ಹಳ್ಳಕ್ಕೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 8.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥॥ ತೇಜಸ್ ಎನರ್ಜಿ ಕಂಪನಿ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥॥ ತೇಜಸ್ ಎನರ್ಜಿ ಕಂಪನಿ ಇವರಿಗೆ ನೋಟೀಸನ್ನು ನೀಡಿ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಉತ್ತರ ನೀಡಿರುತ್ತಾರೆ. ನೀಡಿರುವ ಉತ್ತರ ಪರಿಶೀಲಿಸಲಾಗಿದೆ. ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಮೀನುಗಾರಿಕೆ ಇಲಾಖೆಯಿಂದ, ಕೆ.ಎಸ್.ಪಿ.ಸಿ.ಬಿ. ಯಿಂದ ನಿರಾಕ್ಷೇಪಣೆಯನ್ನು ಪಡೆದು ನೀರಾವರಿ ಮತ್ತು ಅರಣ್ಯ ಇಲಾಖೆಗೆ ಅನುಮೋದನೆಗಾಗಿ ಅರ್ಜಿ ಸಲ್ಲಿಸಿದ್ದು ಹೊರೆತು ಪಡೆಸಿ ಬೇರೆ ಯಾವುದೇ ಅಭಿವೃದ್ಧಿ ಕಾರ್ಯವನ್ನು ಮಾಡಿಲ್ಲ. ಯೋಜನೆಯು ಹಂಚಿಕೆಯಾಗಿ 6 ವರ್ಷಗಳು ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಗಣನೀಯವಾದ ಪ್ರಗತಿಯನ್ನು ಸಾಧಿಸಿರುವುದು ಕಂಡು ಬರುವುದಿಲ್ಲ. ಆದ್ದರಿಂದ ಈಗಾಗಲೇ ಹಂಚಿಕೆ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ :-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 139 ಎನ್‌ಸಿಇ 2010, ಬೆಂಗಳೂರು, ದಿನಾಂಕ: 18-06-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 294 ಎನ್‌ಸಿಇ 2002 ದಿನಾಂಕ: 08.03.2004 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 121 ಎನ್‌ಸಿಇ 2007 ದಿನಾಂಕ: 30.03.2007 ರಲ್ಲಿ ಮೆ|| ತೇಜಸ್ ಎನರ್ಜಿ ಕಂಪನಿ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಕೊಯನಾಡು ಗ್ರಾಮದ ಸಂಪಾಜೆ ಹಳ್ಳಕ್ಕೆ ಅಡ್ಡಲಾಗಿ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. No 1623

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

